# ಆರ್.ಎಂ. ಹಡಪದ್
# R.M. HADAPAD

ಎಂ.ಎಚ್. ಕೃಷ್ಣಯ್ಯ
**M.H. KRISHNAIAH**




**ಕರ್ನಾಟಕ ಲಲಿತಕಲಾ ಅಕಾಡೆಮಿ**
**ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - 560 002.**

**Karnataka Lalithakala Academy**
**Kannada Bhavana, J.C. Road, Bangalore - 560 002.**

**R.M. Hadapad :** A monograph on the life and works of R.M. Hadpad

*Author :* **Prof. M.H. Krishnaiah**

*Published by :* **V. Mallikarjunaswamy**, Registrar, Karnataka Lalithakala Academy, Kannada Bhavana, J.C. Road, Bangalore - 560 002. Ph. 080-22480297

First Edition : 1997
Second Edition : 2007

Pages : 80

Price : Rs. 80-00

ಪ್ರಧಾನ ಸಂಪಾದಕರು : **ವಿ.ಟಿ. ಕಾಳೆ**

ಸಂಪಾದಕರು : **ಸಿ. ಚಂದ್ರಶೇಖರ್**

ಲೇಖಕರು : **ಪ್ರೊ. ಎಂ.ಎಚ್. ಕೃಷ್ಣಯ್ಯ**

ಪ್ರಕಟಣಾ ಸಮಿತಿ :

**ಪುಂಡಲೀಕ ಕಲ್ಲಿಗನೂರ**

**ಡಾ. ಲಕ್ಷ್ಮೀದೇವಿ ಗವಾಯಿ**

**ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ**

ಮುಖಪುಟ ವಿನ್ಯಾಸ : ಪುಂಡಲೀಕ ಕಲ್ಲಿಗನೂರ

Printed By :
**Jagruthi Printers**
#56/1-6, Narasimhaiah Garden,
Kottigepalya, Magadi Main Road,
Bangalore - 560 091. Ph. 9886249672

## ಅಧ್ಯಕ್ಷರ ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ಪುಸ್ತಕ ಪ್ರಕಟಣೆಯೂ ಒಂದು. ಅಕಾಡೆಮಿಯು ಈವರೆಗೆ ಕಲೆ ಮತ್ತು ಕಲಾವಿದರ ಬಗ್ಗೆ ಅನೇಕ ಪುಸ್ತಕಗಳನ್ನು ಹೊರತಂದಿದೆ. ಹಾಗೆಯೇ ಸಮಕಾಲೀನ ಕಲಾವಿದರ ಬಗ್ಗೆಯೂ ಪುಸ್ತಕವನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡಿದೆ. ಈ ಪುಸ್ತಕಗಳು ಹೆಸರಾಂತ ನವ್ಯ ಪರಂಪರೆಯ ಕಲಾವಿದರ, ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ಕಲಾವಿದರ ಬದುಕು ಮತ್ತು ಜೀವನವನ್ನು ಕುರಿತದ್ದಾಗಿರುತ್ತೆ.

ಈ ಸಮಕಾಲೀನ ಕಲಾವಿದರ ಮಾಲೆಯಲ್ಲಿ ಈಗ **ಶ್ರೀ ಆರ್.ಎಂ. ಹಡಪದ್** ಅವರ ಬಗೆಗಿನ ಈ ಪುಸ್ತಕವು ಹೊರಬರುತ್ತಿರುವುದು ಸಂತಸವನ್ನು ತಂದಿದೆ. ಬಿಜಾಪುರದ ಬಾದಾಮಿಯಲ್ಲಿ ಜನಿಸಿದ ಶ್ರೀ ಆರ್.ಎಂ. ಹಡಪದ್ ಅವರು ನವ್ಯ ಕಲಾ ಪರಂಪರೆಯ ಮೊದಲ ಸಾಲಿನ ಕಲಾವಿದರು. ಈ ನಾಡಿನ ಅನೇಕ ಸಮಕಾಲೀನ ಚಿಂತನೆಯ ಕಲಾವಿದರ ಸೃಷ್ಟಿಗೆ ಕಾರಣರಾದ ಇವರು ಉತ್ತಮ ಕಲಾ ಶಿಕ್ಷಕರು. ನಾಡಿನ ಉದ್ದಗಲಕ್ಕೂ ಹರಡಿರುವ ಇವರ ಶಿಷ್ಯರಲ್ಲಿ ನಾನೂ ಒಬ್ಬ ರಾಜ್ಯ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಇವರ ಶಿಷ್ಯರುಗಳು ಕಲಾವಿದರಾಗಿ ಬೆಳೆದಿದ್ದಾರೆ; ಅದಕ್ಕೆ ಕಾರಣರಾದ ಶ್ರೀ ಆರ್.ಎಂ. ಹಡಪದ್ ಅವರ ಬಗ್ಗೆ ಪುಸ್ತಕ ಹೊರಬರುತ್ತಿರುವುದು (ಸ್ವಲ್ಪ ತಡವಾದರೂ) ಅಕಾಡೆಮಿಗೆ ಸಂತಸ ತಂದಿದೆ.

ಇವರ ಬಗ್ಗೆ ಪುಸ್ತಕವನ್ನು ಬರೆದು ಕೊಡಲು ಒಪ್ಪಿಕೊಂಡವರು ಪ್ರೊ. ಎಂ.ಎಚ್. ಕೃಷ್ಣಯ್ಯನವರು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಸೀನಿಯರ್ ಫೆಲೋಶಿಪ್ ಪಡೆದ ಶ್ರೀ ಆರ್.ಎಂ. ಹಡಪದ್ ಅವರ ಬಗ್ಗೆ ಲೇಖಕರು ಹೊಸ ರೀತಿಯ ಒಳನೋಟಗಳಿಂದ ಕಲಾವಿದನ ಜೀವನ ಮತ್ತು ಕೃತಿ, ಅವರ ಸಾಮಾಜಿಕ ಕಾಳಜಿ, ಅವರ ಬದುಕಿನ ಮೌಲ್ಯಗಳನ್ನೆಲ್ಲ ಅತಿ ಸೂಕ್ಷ್ಮವಾಗಿ ಅರಿತುಕೊಂಡು, ಆಳವಾಗಿ ಕಲಾವಿದರ ಜೊತೆ ಚರ್ಚಿಸಿ ಒಂದು ಕಲಾಕೃತಿಯ ರೀತಿಯಲ್ಲೇ ಬರೆದು ಕೊಟ್ಟಿದ್ದಾರೆ. ಅವರಿಗೂ ಹಾಗೂ ಆಂಗ್ಲಭಾಷೆಗೆ ಭಾಷಾಂತರಿಸಿದ ಮಿತ್ರ ಶ್ರೀ ಬಿ.ಆರ್. ವಿಜಯಕುಮಾರ್ ಅವರಿಗೂ ಅಕಾಡೆಮಿಯ ಪರವಾಗಿ ಮತ್ತು ವೈಯುಕ್ತಿಕವಾಗಿ ವಂದಿಸುತ್ತೇನೆ.

ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿದ ಜಾಗೃತಿ ಪ್ರಿಂಟರ್ಸ್ ಅವರನ್ನೂ, ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲರನ್ನೂ ಇಲ್ಲಿ ನೆನೆಯುತ್ತೇನೆ. ಎಂದಿನಂತೆ ನಮ್ಮ ಓದುಗರು ಈ ಪುಸ್ತಕವನ್ನು ತಮ್ಮದಾಗಿಸಿಕೊಳ್ಳುತ್ತಾರೆಂದು ಆಶಿಸುತ್ತೇನೆ

**ವಿ.ಟಿ. ಕಾಳೆ**
**ಅಧ್ಯಕ್ಷರು**
**ಕರ್ನಾಟಕ ಲಲಿತಕಲಾ ಅಕಾಡೆಮಿ**

**ಬೆಂಗಳೂರು**
**2007**

# ಕೃತಜ್ಞತೆ

ಯಾರು ಏನೇ ಹೇಳಲಿ, ಈ ಕಾಲದ ಕರ್ನಾಟಕ ಕಲಾ ಇತಿಹಾಸದಲ್ಲಿ **ಶ್ರೀ ಆರ್.ಎಂ. ಹಡಪದ್** ಅವರದು ಮಹತ್ವದ ಸ್ಥಾನ. ಅವರ ವ್ಯಕ್ತಿತ್ವ ಸರಳ, ಅವರ ಕಲೆ ಸಂಕೀರ್ಣ. ಕಲೆಯ ಕ್ಷೇತ್ರದಲ್ಲಿನ ಅವರ ಕಾರ್ಯವನ್ನು ಹಲವು ನಿಟ್ಟಿನಿಂದ ನೋಡಲು ಸಾಧ್ಯವಿದೆ, ಅವರ ಕಲೆಯನ್ನು ಹಲವು ದೃಷ್ಟಿಯಿಂದ ವಿಶ್ಲೇಷಿಸಲು ಸಾಧ್ಯವಿದೆ. ಇಲ್ಲಿಯದು ಒಂದು ನೋಟ ಮಾತ್ರ. ಚರ್ಚಿಸ ಬೇಕಿತ್ತು ಎನಿಸಿದರೂ ಎಷ್ಟೋ ವಿಷಯ, ವಿವರಗಳನ್ನು ಕೈಬಿಟ್ಟಿದ್ದೇನೆ. ಯಾವುದೇ ಬರವಣಿಗೆಗೂ ಒಂದು ರೂಪ ಇರುತ್ತದೆ, ಒಟ್ಟಂದ ಇರುತ್ತದೆ. ಅಂಥ ಒಂದು ಪ್ರಯತ್ನ ಇಲ್ಲಿಯ ನನ್ನ ನಿಲುವು, ದೃಷ್ಟಿಯಲ್ಲಿ ವ್ಯಕ್ತ.

ಹಲವು ತಿಂಗಳ ಕಾಲ, ಆಗಾಗ್ಗೆ, ಹಡಪದ್ ಅವರಿಗೆ ತೊಂದರೆ ಕೊಟ್ಟಿದ್ದೇನೆ. ನನ್ನ ಬೆದಕುವ ಪ್ರಶ್ನೆಗಳಿಗೂ ನಗುತ್ತಲೇ ಉತ್ತರಿಸಿದ್ದಾರೆ. ಆ ಸಹನೆ ದೊಡ್ಡದು. ಅದಕ್ಕಾಗಿ ಅವರಿಗೆ ಕೃತಜ್ಞನಾಗಿದ್ದೇನೆ. ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದ ಗೆಳೆಯ ಶ್ರೀ ಸಿ. ಚಂದ್ರಶೇಖರ್ ಅವರು ಅದೆಷ್ಟು ದೂರವಾಣಿ ಕರೆಗಳನ್ನು ಮಾಡಿದ್ದಾರೊ ಲೆಕ್ಕವಿಲ್ಲ. ಅವರ ಸ್ನೇಹದ ಒತ್ತಾಸೆಗೆ ಋಣಿಯಾಗಿದ್ದೇನೆ. ಗೆಳೆಯ ಶ್ರೀ ಬಿ.ಆರ್. ವಿಜಯಕುಮಾರ್ ಅವರದು ಸಂಗ್ರಹಾನುವಾದದಲ್ಲೂ ಲಯವನ್ನು ಹಿಡಿಯುವ ಸಾಹಸ. ಅವರಿಗೆ ಕೃತಜ್ಞತೆಗಳು. ನೂರಾರು ಕಲಾಕೃತಿಗಳನ್ನು ನೋಡುವಲ್ಲಿ, ವಿಂಗಡಿಸುವಲ್ಲಿ, ಆಯ್ಕೆ ಮಾಡುವಲ್ಲಿ ಹಲವು ಗೆಳೆಯರು, ಹಡಪದ್ ಅವರ ಶಿಷ್ಯರು ನೆರವಾಗಿದ್ದಾರೆ. ಅವರ ಸಹನೆಯ ಶ್ರಮವನ್ನು ಕೃತಜ್ಞತೆಯಿಂದ ನೆನೆಯುತ್ತೇನೆ. ಶ್ರೀ ಬಿ.ಎಲ್. ಶ್ರೀನಿವಾಸ ಅವರು ಕಲಾ ಗ್ರಂಥಗಳನ್ನು ಮುದ್ರಿಸಿರುವ ಅನುಭವಿ. ಅವರ ಮತ್ತು ಅಕಾಡೆಮಿ ಅಧ್ಯಕ್ಷರ ವಿನ್ಯಾಸದ ಕಲ್ಪನೆಯಿಂದ ಈ ಪುಟ್ಟ ಹೊತ್ತಿಗೆಗೂ ಒಂದು ಅಂದ ಬಂದಿದೆ, ಅವರಿಗೆ ವಂದನೆಗಳು ಸಲ್ಲುತ್ತವೆ.

ಈ ದಿಸೆಯಲ್ಲಿ ಈಗ ಪುನರ್‌ಮುದ್ರಣಗೊಳ್ಳುತ್ತಿರುವ ಆರ್.ಎಂ. ಹಡಪದ್‌ರ ಕೃತಿಯನ್ನು ಕಲಾವಿದರು, ಸಾಹಿತ್ಯಪ್ರಿಯರ ಮತ್ತು ಓದುಗರ ಅವಗಾಹನೆಗೆ ತರಲು ಅಕಾಡೆಮಿಯ ಈ ಸಾಧನೆಗೆ ಪ್ರೋತ್ಸಾಹ ದೊರಕುವುದೆಂದು ಆಶಿಸೋಣ.

**ಬೆಂಗಳೂರು** **ಎಂ.ಹೆಚ್. ಕೃಷ್ಣಯ್ಯ**
**ಡಿಸೆಂಬರ್, 1997**

1

We are all of us children of our time
and can never leap over its shadows.
- Richard Strauss

The Modern and the old have always been.
- Ferruccio Busoni

## ಬಾದಾಮಿಯ ಬಂಡೆಗಳು

ವ್ಯಕ್ತಿಗಳು ಹುಟ್ಟುತ್ತಾರೆ, ಬೆಳೆಯುತ್ತಾರೆ; ಗತಕಾಲ ಭೌತಿಕವಾಗಿ, ಸಾಂಸ್ಕೃತಿಕವಾಗಿ ನಿರ್ಧರಿಸಿರುವ ಪರಿಸರದಲ್ಲಿ ಬದುಕುತ್ತಾರೆ. ಅದರಲ್ಲಿ ಭಾಗಿಯಾಗುತ್ತಾರೆ, ಒಡನಾಡುತ್ತಾರೆ. ಆದರೆ ಎಲ್ಲೋ ಕೆಲವರಿಂದ ಮಾತ್ರ ಆ ಪರಿಸರದಲ್ಲಿ ಪರಿಣಾಮಕಾರೀ ಬದಲಾವಣೆ ತರಲು ಸಾಧ್ಯವಾಗುತ್ತದೆ.

ಬದಲಾವಣೆ ಜೀವಂತಿಕೆಯ ಲಕ್ಷಣ. ಜೀವಂತ ಸಂಸ್ಕೃತಿ ನದಿಯಂತೆ. ಹರಿಯುವ ಕಾಲಕ್ಕೆ ಯಾರೂ ತಡೆಯೊಡ್ಡಲು ಸಾಧ್ಯವಿಲ್ಲ. ಹಾಗೆ ತಡೆ ಕಟ್ಟಿದರೂ - ವ್ಯಕ್ತಿ, ಸಂಘಟನೆ, ಸಮಾಜ ಯಾವುದೇ ಇರಲಿ - ಪ್ರವಾಹ ಒಡ್ಡನ್ನು ಕೊಚ್ಚಿ ಹರಿಯುತ್ತದೆ. ಹಾಗೆ ಬದಲಾದ ವರ್ತಮಾನವೂ ಸಾತತ್ಯದ ಕೊಂಡಿ ಮಾತ್ರ. ಬದಲಾವಣೆ ತರುವ ವ್ಯಕ್ತಿಯೂ ಸಾತತ್ಯದ ಒಂದು ಕೊಂಡಿಯಾಗುತ್ತಾನೆ. ಬದಲಾವಣೆ ಆಗದ್ದು ಎಂದರೆ ಬದಲಾವಣೆ ಮಾತ್ರ. ಒಂದು ಕಾಲದಿಂದ ಮತ್ತೊಂದಕ್ಕೆ ಆಗುವ ಬದಲಾವಣೆ ಯಾವ ಬಗೆಯದು? ಬದಲಾವಣೆಯ ಗತಿ, ಪ್ರಮಾಣ ಮಾತ್ರ. ಕಲೆಯ ಕ್ಷೇತ್ರದಲ್ಲಿ ಇದು ಸ್ಪಷ್ಟ. ಕೆಲವು ಕಾಲದಲ್ಲಿ ಸ್ಥಿರತೆ ಕಂಡುಬರುತ್ತದೆ. ಜಡತೆ ಎನ್ನಬಹುದೇನೊ. ಸಂಪ್ರದಾಯದ ಬಲ ಅಪಾರ; ಮುಂಬರಲು ಹೆಣಗುವ ಹೊಸ

ಆಲೋಚನೆಗಳನ್ನು ಹಿಂದಕ್ಕೆ ಎಳೆಯುತ್ತವೆ, ತಡೆಯುತ್ತವೆ. ಮತ್ತೆ ಕೆಲವು ಕಾಲದಲ್ಲಿ ಸಮಾಜ ಬದಲಾವಣೆಗೆ ತೆರೆದಿರುತ್ತದೆ. ಹಿಂದೊಂದು ಕಾಲದಲ್ಲಿ ಹಲವಾರು ತಲೆಮಾರುಗಳಲ್ಲಿ ಆಗುತ್ತಿದ್ದ ಬದಲಾವಣೆಗಳು ಒಂದೇ ತಲೆಮಾರಿನಲ್ಲಿ ಆಗಿಹೋಗುತ್ತವೆ. ಆದರ ಪರಿಣಾಮವಾಗಿ ಅಲ್ಪ ಕಾಲಾವಧಿಯಲ್ಲಿ, ಶೀಘ್ರವಾಗಿ, ಉಸಿರು ಕಟ್ಟಿಸುವ ವೇಗದಲ್ಲಿ ಹೊಸ ದಿಗಂತಗಳು ತೆರೆದುಕೊಳ್ಳುತ್ತವೆ. ನಮ್ಮ ಕಾಲ ಆ ಬಗೆಯದು. ಸ್ವಾತಂತ್ರ್ಯೋತ್ತರ ಕಾಲ ಬಹು ವೇಗದ ಬದಲಾವಣೆಗಳನ್ನು ಕಂಡಿದೆ. ಈ ಶತಮಾನದ ಪ್ರಾರಂಭದ ದಶಕಗಳಲ್ಲಿನ ಮಂದಗತಿ ಐವತ್ತು, ಅರವತ್ತರ ದಶಕದ ನಂತರ ವೇಗವಾಯಿತು. ಕರ್ನಾಟಕದಲ್ಲಿ ಚಿತ್ರಕಲಾ ರಂಗದಲ್ಲಿ ಹೊಸ ನೋಟಗಳನ್ನು ನೀಡಿ, ಪರಿಸರವನ್ನೇ ಬದಲಿಸಿದ ಕಲಾವಿದ ಆರ್.ಎಂ. ಹಡಪದ್, ಕಲೆ ಬದುಕಿನ ಒಂದು ಭಾಗ; ಸಮಾಜ ಮತ್ತು ಬದುಕು ಬದಲಾದಂತೆ ಅದೂ ಬದಲಾಗಬೇಕು. ಅದಕ್ಕೆ ಒಂದು ನೆಪ, ಪ್ರೇರಣೆ, ಚಾಲನ ಶಕ್ತಿ ಬೇಕು. ಆ ಕಾರ್ಯವನ್ನು ಹಡಪದರ ಕಲಾ ಪ್ರತಿಭೆ ಮಾಡಿತು. ಎಲ್ಲ ಕಲೆಯೂ ತನ್ನ ಗತಕಾಲದ ಸತ್ವವನ್ನು ಹೀರಿ ಬೆಳೆಯುತ್ತದೆ. ಹಿಂದಿನ ತಲೆಮಾರು ಮುಟ್ಟಿದ ಘಟ್ಟ ಮುಂದಿನ ತಲೆಮಾರಿಗೆ ಆರಂಭದ ಮೆಟ್ಟಿಲಾಗುತ್ತದೆ. ಆದ್ದರಿಂದ ಕಲಾವಿದನೊಬ್ಬನ ಬದುಕು ಸಾಧನೆಗಳ ಪರಿಶೀಲನೆಯಲ್ಲಿ ವರ್ತಮಾನದ ಸ್ಥಿತಿಗೆ ಗತಕಾಲದ ವಿಕಾಸದ ಕೊಡುಗೆಯೂ ಗಮನಾರ್ಹವಾಗುತ್ತದೆ. ಸಾಂಸ್ಕೃತಿಕ ಪರಿಸರದಲ್ಲಿ ಬದಲಾಗುತ್ತಿರುವ ಕಲೆಯ ಸ್ಥಿತಿಗತಿಗಳೂ ಮುಖ್ಯವಾಗುತ್ತವೆ. ಏಕೆಂದರೆ ಕಲಾವಿದ ಪರಿಸರದಲ್ಲಿ ಮಗು.

ಬಾದಾಮಿ ಹಡಪದ್ ಅವರು ಹುಟ್ಟಿದ ಊರು. ಬಾಲ್ಯ ಕಳೆದದ್ದು ಅಲ್ಲಿ. ಮೊದಲು ಶಾಲೆ ಕಲಿತದ್ದು ಅಲ್ಲಿ, ಮೂಲ್ಕಿ ಪರೀಕ್ಷೆವರೆಗೆ. ಅನಂತರ ಗುಳೇದಗುಡ್ಡ, ಮತ್ತೆ ಬಾಗಲಕೋಟೆ ಬಸವೇಶ್ವರ ಹೈಸ್ಕೂಲ್‌ನಲ್ಲಿ ವಿದ್ಯಾಭ್ಯಾಸ. ಎಸ್.ಎಸ್.ಸಿ.ಗೆ ಒಂದು ಐಚ್ಛಿಕ ವಿಷಯವಾಗಿ ಚಿತ್ರಕಲೆ ತೆಗೆದುಕೊಂಡಿದ್ದರು. ಎಸ್.ಎಸ್.ಸಿ.ಯಲ್ಲಿ ಉತ್ತೀರ್ಣರಾಗುವ ಮೊದಲೇ ಖಾಸಗಿಯಾಗಿ, ಟಿ.ಪಿ. ಅಕ್ಕಿಯವರ ಗದಗದ ವಿಜಯ ಕಲಾ ಮಂದಿರದಿಂದ ಮುಂಬಯಿಯ ಜೆ.ಜೆ. ಕಲಾಶಾಲೆಯ ಒಂದು ಪರೀಕ್ಷೆಗೆ ಕಟ್ಟಿ ಉತ್ತೀರ್ಣರಾಗಿದ್ದರು. ಎಸ್.ಎಸ್.ಸಿ. ನಂತರ ಮಿಣಜಗಿಯವರ ಹುಬ್ಬಳ್ಳಿ ಕಲಾಮಂದಿರದಿಂದ ಇಂಟರ್‌ಮೀಡಿಯೇಟ್ ಮತ್ತು ಅಡ್ವಾನ್ಸ್ಡ್ ಪೇಂಟಿಂಗ್ ಮಾಡಿ, ಜೆ.ಜೆ. ಕಲಾಶಾಲೆಯ ಡಿಪ್ಲೊಮಾ ಮುಗಿಸಿದರು. ಅಲ್ಲಿಂದಲೇ ಡಿ.ಟಿ.ಸಿ. ಮತ್ತು ಎ.ಎಂ. ಮಾಡಿದರು. ಇದು ಔಪಚಾರಿಕ ಶಿಕ್ಷಣದ ಚೌಕಟ್ಟು ಮಾತ್ರ. ಅವರು ಶಾಲೆಯಲ್ಲಿ ಕಲಿತದ್ದು ಅಲ್ಲ, ಅದೂ ಅಕಾಡೆಮಿಕ್ ವಾತಾವರಣದ್ದು. ಅವರ ಕಲಾಭ್ಯಾಸದ ಜೀವಂತ ಶಾಲೆ ಬಾದಾಮಿ. ಬಾಲ್ಯದ ದಿನಗಳು, ಅಲ್ಲಿನ ಆಟ, ನೋಟ, ಉತ್ಸಾಹದ ಸಾಹಸಗಳು, ಪಡೆದ ಅನುಭವಗಳು ಕಲಾವಿದ ಹಡಪದರನ್ನು ರೂಪಿಸಿದವು. ಒಳಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರಿದವು. ಅಂದಿನಿಂದ ಇಂದಿನವರೆಗೂ ಪ್ರಭಾವ ಬೀರುತ್ತಲೇ ಬಂದಿವೆ. ಪ್ರಪಂಚದ ಬಹುತೇಕ ಕಲಾವಿದರ ಮೇಲಾದ ಬಾಲ್ಯದ ದಿನಗಳ ಪ್ರಭಾವವನ್ನು, ಒಂದಲ್ಲ ಒಂದು ಬಗೆಯಲ್ಲಿ ಕಾಣಬಹುದು. ಅವರ ಕಲಾ ರಚನೆಗಳ ವಿಶ್ಲೇಷಣೆಗೆ ಈ ಮೂಲ

ಸೆಲೆಯ ಅರಿವು ನೆರವಾಗುತ್ತದೆ. ಮಕ್ಕಳ ಮನಸ್ಸಿಗೆ ಅನುಭವಗಳೆಲ್ಲ ಜೀವಂತ. ಜಡ, ಜೀವ ಎಂಬ ಭೇದ ಇರುವುದಿಲ್ಲ. ಮರ ಗಿಡ ಬಂಡೆ ಕೋಲು ಎಲ್ಲ ಚೈತನ್ಯಶೀಲ. ಎಳೆಯ ಮನಸ್ಸಿಗೆ ಜ್ಞಾನೇಂದ್ರಿಯಗಳ ಭೇದವಿಲ್ಲ. ಇಡಿಯಾಗಿ ಅನುಭವಿಸುವ ಶಕ್ತಿ ಇರುತ್ತದೆ. ನೋಡಿದ್ದನ್ನು, ಅನುಭವಿಸಿದ್ದನ್ನು ಇಡಿಯಾಗಿ ಅದರ ಸತ್ವವನ್ನು ಹೀರಿ ಸುಪ್ತ ಪ್ರಜ್ಞೆಯಲ್ಲಿ ಹಿಡಿದಿಡುತ್ತದೆ. ಅದರಲ್ಲೂ ದೃಶ್ಯಾನುಭವಗಳು. ದೊಡ್ಡವರಲ್ಲಿ, ಕಲಾವಿದರಲ್ಲಿ ಮಾತ್ರ ಇಂಥ ಗುಣ ಕಾಣಬಹುದು. ಮಕ್ಕಳ ಮನಸ್ಸು ಆ ಬಗೆಯದು. ಅವರಲ್ಲಿ ಯಾರಲ್ಲಿ ದೃಶ್ಯ ಶಕ್ತಿ ಪ್ರಬಲವಾಗಿದೆಯೋ ಅವರು ಮುಂದೆ ಕಲಾರಚನೆಗಳಲ್ಲಿ ಅವನ್ನು ಬಳಸಿಕೊಳ್ಳಬಹುದು. ಅದು ಅಪ್ರಜ್ಞಾಪೂರ್ವಕವಾಗಿಯೂ ಪ್ರಭಾವ ಬೀರಬಹುದು. ಹಡಪದರ ಮೇಲೆ ಬಾದಾಮಿಯ ಬಾಲ್ಯದ ದಿನಗಳ ಪ್ರಭಾವ ಅಂತಹುದು.

ಬಾದಾಮಿಯ ಬಂಡೆಗಳಲ್ಲಿ ಕರ್ನಾಟಕದ ಕಲೆ ಅರಳಿದೆ. ಅದೇ ಮಣ್ಣಿನಿಂದ ಹಡಪದ ಅವರೂ ಬಂದವರು ಎಂದಾಗ ಒಂದು ಪರಂಪರೆಯ ನಿರಂತರತೆಯ, ಮುಂದುವರಿಕೆಯ, ಚಾಲುಕ್ಯ ಶೈಲಿಯಿಂದ ಆಧುನಿಕ ಅಮೂರ್ತ ಕಲೆಯವರೆಗಿನ ಒಂದು ಆವರ್ತನದ ಅರಿವಾಗುತ್ತದೆ. ಬಾದಾಮಿಯ ಬಂಡೆಗಳು, ಸುತ್ತಲ ಪರಿಸರ ನಿಸರ್ಗದ ಕಲಾ ಸೃಷ್ಟಿಯಾದರೆ, ಬಾದಾಮಿಯ ಗುಹೆಗಳಲ್ಲಿನ ಅದ್ಭುತ ಶಿಲ್ಪಗಳು ಮಾನವ ಸೃಷ್ಟಿ. ಬಂಡೆ, ಗುಹಾಶಿಲ್ಪ, ಬದುಕಿನ ಅನುಭವಗಳು, ಸಾಂಸ್ಕೃತಿಕ ಪರಿಸರ ಹಡಪದರ ಕಲಾ ರಚನೆಗಳ ಮೂಲ ಸೆಲೆಯಾಗಿದೆ. ಹಡಪದರು ಜರ್ಮನಿಯ ಹೈಡಲ್‌ಬರ್ಗ್‌ಗೆ ಹೋಗಿ ಕಲಾಕೃತಿಗಳನ್ನು ರಚಿಸಿ ತೋರಿದಾಗ, ಅವರ ಕಲಾಕೃತಿಗಳ ಪ್ರದರ್ಶನ ಸಂದರ್ಭದಲ್ಲಿ, ವ್ಯವಸ್ಥಾಪಕರು Images of Indiaದಲ್ಲಿ ಅವರನ್ನು ಕುರಿತು ಹೀಗೆ ಪರಿಚಯಿಸಿದ್ದಾರೆ :

"It is an unique experience to be around him and see draw or paint. It's all music! Every stroke of his brush brings out the rhythm of colours, even when the pictures are in black and white".

"He has succeeded in blending 'That Touch of India' with the 'Modern'. One experiences, while seeing his works, that they are not 'Modern' just for 'Modern' or to achieve the 'In thing".

ಕರ್ನಾಟಕ ಕಲಾ ಪರಂಪರೆಯ ಮತ್ತು ಬದುಕಿನ ಸತ್ವ ಭಾರತೀಯತೆಯ ಭಾಗವೆ. ಹಡಪದರಿಗೆ ಆಧುನಿಕತೆ, ನವ್ಯತೆ ಎಂಬುದು ಒಂದು ಬೆಳವಣಿಗೆ. ಬಾದಾಮಿಯ ಬೇರಿನ ಬೆಳವಣಿಗೆ, ಕೃತಕ ಪಾಶ್ಚಾತ್ಯ ಅನುಕರಣ ಅಲ್ಲ.

ಬಾದಾಮಿ ಒಂದು ಕಾಲಕ್ಕೆ ಚಾಲುಕ್ಯರ ರಾಜಧಾನಿಯಾಗಿದ್ದ ಇತಿಹಾಸ ಪ್ರಸಿದ್ಧ ಸ್ಥಳ. ಅರ್ಧವರ್ತುಲಾಕಾರದ ಕೆರೆಯ ಬದಿಗೆ ಊರು, ಆಚೆಗೆ ಮೂರು ಕಡೆಗೆ ಕಡಿದಾದ ಬೆಟ್ಟಗಳು,

ನೈಸರ್ಗಿಕವಾದ ಗೋಡೆಗಳಂತೆ. ಹಿಂದೆ ಕೋಟೆ. ಊರಿನ ಕೋಟೆ, ಕಂದಕ ಎಲ್ಲವನ್ನೂ ಈಗ ಕೆಡವಲಾಗಿದೆ. ಬಗೆ ಬಗೆಯ ಗಾತ್ರದ, ಆಕಾರದ ಬಂಡೆಗಳು ಒಂದಕ್ಕೊಂದು ಒತ್ತಾಗಿ ಕೂಡಿ, ಕೆಲವೆಡೆ ಸಂದುಗಳಲ್ಲಿ ಗಿಡಗಳು ಬೆಳೆದು, ಒತ್ತಾಗಿ ಕೂಡಿ ನಿಂತು ನೈಸರ್ಗಿಕ ಗೋಡೆ ನಿರ್ಮಾಣಗೊಂಡಿರುವಂತೆ ಅನುಭವ. ಈ ಬಂಡೆಗಳ ದೃಶ್ಯ ಅನಂತ, ವೈವಿಧ್ಯಮಯ. ಋತು ಋತುವಿಗೂ ಬದಲಾಗುವ ದೃಶ್ಯಗಳು. ಬಂಡೆಗಳ ಮೇಲೆ ಮಳೆ ಬಿದ್ದು, ನೀರು ಸೇರಿ, ಪಾಚಿ, ಕಲ್ಲು ಹೂ ಬೆಳೆದು ಉಂಟಾಗುವ ಬಿಡಿ ಬಿಡಿ ತಾಣಗಳ ಬಣ್ಣಗಳ ಬೆಡಗು. ಮುಂಜಾನೆ, ಮಧ್ಯಾಹ್ನ, ಸಂಜೆ, ಮಳೆಗಾಲ, ಮಂಜು ಸುರಿದಾಗ ಮುಂತಾಗಿ, ಜೀವಂತವಾಗಿ ನಿಮಿಷ ನಿಮಿಷಕ್ಕೂ ಬದಲಾಗುವ ಅವುಗಳ ಸ್ವರೂಪ. ಸೂರ್ಯೋದಯ ಒಂದು ದಿನದಂತೆ ಮತ್ತೊಂದು ದಿನ ಇಲ್ಲ. ಏಕೆಂದರೆ ಪ್ರಕೃತಿಯ ಸಂಬಂಧಗಳು ಭಿನ್ನ ಭಿನ್ನವಾಗಿರುತ್ತವೆ. ಮೇಲೆ ಆಕಾಶದಲ್ಲಿ ಬಿಳಿ ಮೋಡಗಳು ತೇಲುವಾಗಿನ ಕೆಳಗಿನ ಬಂಡೆಗಳು, ಮಳೆಗಾಲದ ಕಪ್ಪು ಮೋಡಗಳು ಕೆಳಕೆಳಗೆ ಇಳಿದು ಮಳೆ ಸುರಿಯುವಾಗಿನ ದೃಶ್ಯ. ಮಂಜು, ಮಂಜಿನ ಮೇಲೆ ಬಿದ್ದಿರುವ ಬಿಸಿಲು ಮೂಡಿಸುವ ದೃಶ್ಯ. ಬಂಡೆಗಳು ಸ್ಥಿರವಾಗಿ ನಿಂತಿರುತ್ತವೆ. ಮೋಡಗಳು ಚಲಿಸುತ್ತಿರುತ್ತವೆ. ಬಂಡೆಗಳ ಕಂದು, ಕೆಂಪು ಹಾಗೂ ಮೋಡಗಳ ಬಿಳಿ, ಕಪ್ಪು, ನೀಲಿ ವರ್ಣಛಾಯೆಗಳು ಎಲ್ಲವೂ ನಮ್ಮ, ಜಡವಲ್ಲ, ಚಲಿಸುತ್ತಿರುವಂತೆ ಎನಿಸುತ್ತೆ; ಜೀವಂತಿಕೆಯ, ನಿಸರ್ಗ ಚೈತನ್ಯದ ಅನುಭವ. ಬಂಡೆಗಳ ವರ್ಣಛಾಯೆಗಳು ಅನಂತ. ಕಂದು, ತಿಳಿಕೆಂಪು, ಕಿತ್ತಳೆ, ನೆರಳು ಬೀಳುವ ಕಡೆ ನೇರಳೆ. ಜೊತೆಗೆ ಒಣ ಎಲೆಹಸಿರು ಬಣ್ಣ. ಋತು ಬದಲಾದಂತೆ ಹಸಿರಿನಲ್ಲೂ ಹಲವು ಬಗೆ. ಚಿಗುರು ಹಸಿರು, ಗಾಢ ಹಸಿರು, ಕೊಂಚ ಕಂದು ಬಣ್ಣಕ್ಕೆ ತಿರುಗಿದಾಗ ಇಡೀ ದೃಶ್ಯ ಹೊಸ ಸಂಯೋಜನೆಯ ಅನುಭವ ಕೊಡುತ್ತದೆ. ಕೆರೆ ನೀರಿನ ಬಣ್ಣವೂ ಹಸಿರಾಗಿ ಕಾಣುತ್ತೆ. ಇದಕ್ಕೆ ವನಸ್ಪತಿಗಳು ಕಾರಣ. ಆಕಾಶ, ಬಂಡೆಗಳು, ಕೆರೆ ಇವು ಒಂದಕ್ಕೊಂದು ವೈದೃಶ್ಯ ಸೃಷ್ಟಿಸಿ ಮನಸ್ಸಿನ ಮೇಲೆ ಗಾಢ ಪರಿಣಾಮ ಬೀರುತ್ತವೆ. ಆಳ ಮನಸ್ಸಿಗೆ ಇಳಿದು ನಿಲ್ಲುತ್ತವೆ.

ಸಂದಿಗೊಂದಿಗಳಲ್ಲಿ ಓಡಾಡುತ್ತಾ, ಬಂಡೆ ಕಾಡುಗಳಲ್ಲಿ ಚಿಟ್ಟೆ ಜೇನು ಸಂಗ್ರಹಿಸುತ್ತಿದ್ದ ಗೂಡುಗಳಲ್ಲಿ ಕೈಹಾಕಿ ಹಿಂಡಿ ಜೇನು ನೆಕ್ಕುತ್ತಿದ್ದ ಬಾಲ್ಯದ ಸಾಹಸಗಳು. ಮಳೆ ಬಂದಾಗ ಬಂಡೆಗಳ ನಡುವಿನ ವನಸ್ಪತಿಗಳಿಂದ ಒಂದು ಬಗೆಯ ಎಣ್ಣೆಯಂತಹ ದ್ರವ ಹರಿದು ಚಿನ್ನದ ಬಣ್ಣದಿಂದ ಹೊಳೆಯುವುದು. ಬಂಡೆಗಳ ಮೇಲೆ ಅಲ್ಲಲ್ಲಿ ಮರಳು, ಅಲ್ಲಲ್ಲಿ ನೀರಿನ ಕುಂಡಗಳು. ಆಟವಾಡುವ ಹುಡುಗರು ಹೊರಳಾಡಿದಾಗ ಮೈಯೆಲ್ಲ ಬಂಗಾರದ ಬಣ್ಣ. ಇವೆಲ್ಲ ಹಡಪದರ ಸ್ಮೃತಿ ಪಟಲಗಳಲ್ಲಿ ನಿಚ್ಚಳವಾಗಿ ಈಗಲೂ ಉಳಿದಿವೆ.

ಬಾಲ್ಯದಿಂದಲೂ ಹಡಪದರ ದೃಕ್ ಗ್ರಹಣಶಕ್ತಿ ಪ್ರಬಲವಾದುದು. ಸಣ್ಣ ಬಾಲಕ. ಅಕ್ಷರ ಕಲಿಸಲು ತಂದೆ ಬಾಳಾಚಾರ್ ಮಾಸ್ತರರ ಬಳಿ ಕರೆದೊಯ್ದರು. ಕಲಿಕೆಯ ಪ್ರಾರಂಭ ಸಾಂಪ್ರದಾಯಿಕವಾಗಿ ಆಗಬೇಕೆಂದು ತಂದೆಯ ಬಯಕೆ. ಮಾಸ್ತರರು ಶಿಷ್ಯನನ್ನು ಎದುರಿಗೆ

ಕೂರಿಸಿ ವಿಧಿವತ್ತಾಗಿ ವಿದ್ಯಾಭ್ಯಾಸಕ್ಕೆ ನಾಂದಿ ಹಾಕಿದರು. ಸೆಗಣಿ ಸಾರಿಸಿದ ಹಸಿರು ನೆಲದ ಮೇಲೆ ಕೆಂಪು ಸುಣ್ಣದಿಂದ ಒಂದು ವೃತ್ತ ಬರೆದರು. ನಡುವೆ ಅ ಬರೆದರು. ಬಾಲಕನಿಗೆ ಕಂಡದ್ದು ಅಕ್ಷರವಲ್ಲ, ಹಸಿರುಬಣ್ಣ, ಕೆಂಪು ವೃತ್ತ, ಅಕ್ಷರದ ಆಕಾರಗಳು. ಆ ವಯಸ್ಸಿಗೆ ಬಾಲಕನಿಗೆ ಬಣ್ಣ, ಆಕಾರಗಳ ಸೂಕ್ಷ್ಮ ಸಂವೇದನೆ. ಅದು ಸಹಜವಾಗಿ ಬಂದಿತ್ತು. ವಂಶದಿಂದ ಬಂದಿದ್ದೆ ಎಂದರೆ ಮನೆಯಲ್ಲಿ ಸಂಗೀತದಲ್ಲಿ ಎಲ್ಲ ಆಸಕ್ತರು. ಕಲೆಯ ಸಂಸ್ಕಾರಕ್ಕೆ ಅಲ್ಲಿನ ಸಾಂಸ್ಕೃತಿಕ ಪರಿಸರ ಕಾರಣ ಎನಿಸುತ್ತೆ.

ಹಡಪದ್ ಅವರು ರಚಿಸಿರುವ ನಿಸರ್ಗ ದೃಶ್ಯಗಳಲ್ಲಿ ಬಾಲ್ಯದ ಅನುಭವಗಳ ಪ್ರಭಾವ ಬಗೆ ಬಗೆಯಾಗಿ ಸೇರಿ ಮೂಡಿ ಬಂದಿದೆ. ಬಂಡೆಗಳ ಗಾತ್ರದ ದೃಢತೆ, ಘನತೆ Solidity, ಹಿಂದೆ ವಿವರಿಸಿದಂತಹ ಬದಲಾಗುವ ನಮ್ಯ ಗುಣ, Plasticity, ಬಣ್ಣದ ತುಣುಕು ತಾಣಗಳು, patches, ಆಕಾರಗಳ ರೇಖಾತ್ಮ ಕತೆ, ಒಂದಕ್ಕೊಂದು ಒತ್ತಿನಿಲ್ಲುವ ಬಗೆಗಳು ಇವೆಲ್ಲಾ ನಿಸರ್ಗ ದೃಶ್ಯಗಳಲ್ಲಲ್ಲದೆ, ಅವರ ಅಮೂರ್ತ ಚಿತ್ರಗಳಲ್ಲೂ ಕಾಣಿಸಿಕೊಳ್ಳುತ್ತವೆ. ವಿದ್ಯಾರ್ಥಿಯಾಗಿದ್ದ ಕಾಲದಲ್ಲೇ ನಿಸರ್ಗ ಚಿತ್ರಗಳನ್ನು ರಚಿಸುತ್ತಿದ್ದರು, ಅನಂತರವೂ ರಚಿಸಿದ್ದಾರೆ. ಬಾದಾಮಿ ಮಾತ್ರವಲ್ಲ, ಹಂಪಿ, ರಾಮನಗರ ಬಂಡೆಗಳ ದೃಶ್ಯಗಳನ್ನೂ ರಚಿಸಿದ್ದಾರೆ. ಅವುಗಳ ಬೇರೆ ಬೇರೆ ಸರಣಿ ಚಿತ್ರಗಳಿವೆ. ಮೊದ ಮೊದಲ ರಚನೆಗಳು ಅಭ್ಯಾಸ ಚಿತ್ರಗಳು. ಅನಂತರದಲ್ಲಿ ಬಾದಾಮಿಯ ಬಗೆಬಗೆಯ ವಾತಾವರಣವನ್ನು, ಭಾವನೆಗಳನ್ನು ಹಿಡಿದಿರುವುದನ್ನು, ತಂದಿರುವುದನ್ನು ಕಾಣಬಹುದು. ವಸ್ತುನಿಷ್ಠ ವಾಸ್ತವವಾದೀ ರೀತಿಯವರು ಕಡಿಮೆ. ಭಾವನಾತ್ಮಕವಾಗಿ ರಚಿಸಿದಾಗ ದೃಶ್ಯದ ಬಿಡಿ ಬಿಡಿ ಭಾಗಕ್ಕಿಂತ ಒಟ್ಟು ಪರಿಣಾಮದ ಕಡೆ ಗಮನ. ಮುರಿದು, ತೆಗೆದು ಪುನರ್ ಸೃಷ್ಟಿಸುವ ವಿಧಾನ. ಬಂಡೆ ಮುಂತಾದ ಆಕಾರಗಳ ರಚನೆಯಲ್ಲಿ ಅಂಚುಗಳ ರೇಖೆ ಪ್ರಧಾನವಾಗುವುದೂ, ಮನೆ ರಸ್ತೆ ತೋರುವಲ್ಲಿ ತುಂಡು ರೇಖೆಗಳ ಬಳಕೆಯೂ ಕಣ್ಣಿಲೆ ದೃಷ್ಟಿಯಿಂದ ಮಾತ್ರವಲ್ಲದೆ ಭಾವಾಭಿವ್ಯಕ್ತಿ ದೃಷ್ಟಿಯಿಂದಲೂ ಮುಖ್ಯವಾಗುತ್ತವೆ. ಕೆಲವು ರಚನೆಗಳಲ್ಲಿ ರೇಖೆಗೆ ಒತ್ತಿದ್ದರೆ, ಕೆಲವಲ್ಲಿ ಬಣ್ಣಕ್ಕೆ ಒತ್ತು ಇರುತ್ತೆ. ಭಾಗಗಳು, ಬಣ್ಣಗಳು ಪರಸ್ಪರ ಸಂಬಂಧ ಹೊಂದಿ ಬೆಳೆಯುತ್ತವೆ. ಒಂದು ರಚನೆಯಲ್ಲಿ ಬಾದಾಮಿಯ ಕೆರೆ, ಊರು ಇದ್ದು ಅದರಾಚೆಯ ಗುಡ್ಡ ಬೆಟ್ಟಗಳನ್ನೇ ಕೈ ಬಿಟ್ಟಿದ್ದಾರೆ, ಸಂಯೋಜನೆಯ ದೃಷ್ಟಿಯಿಂದ. ಅಪರೂಪಕ್ಕೆ ಶುದ್ಧ ಅಕಾಡೆಮಿಕ್ ಪದ್ಧತಿಯಲ್ಲಿ ಮಾಡಿದ ಲ್ಯಾಂಡ್‌ಸ್ಕೇಪ್ ಒಂದಿದೆ. ಆದರೆ ಅದು ಹಡಪದ್ ಶೈಲಿ ಅಲ್ಲ. ದೃಶ್ಯದ ವಿವರಗಳನ್ನು ಬಿಡಿಸುವುದು ಅವರ ಸ್ವಭಾವ ಅಲ್ಲ. ಸರಳೀಕರಣ, ಕನಿಷ್ಠ ರೇಖೆಗಳಿಗೆ ಇಳಿಸುವುದು, ಅಮೂರ್ತತೆಯತ್ತ ವಾಲುವುದು ಅವರ ರೀತಿ. ನಯಗಾರಿಕೆಗಿಂತ ಭಾವಸ್ಪಂದಿಸುವ ಬಿರುಸುಗಾರಿಕೆ, ಸಮತೋಲ ಸಾಧಿಸಿದ, ತುಷ್ಟಿ ನೀಡುವ ವಿಶಾಲ ದೃಶ್ಯಗಳ ಅನುಭವ ಅವರ ನಿಸರ್ಗದೃಶ್ಯಗಳಿಂದ ಆಗುತ್ತದೆ. ರಾಮನಗರದ ಒಂದು ಬಂಡೆಯೇ ಚಿತ್ರದ ವಸ್ತುವಾಗಿರುವುದುಂಟು. ಚಿತ್ರವನ್ನೂ ಕಾವ್ಯವಾಗಿಸಿರುವುದುಂಟು. ಬೆಂಗಳೂರಿಗೆ ಬಂದನಂತರ

ನೆನಪಿನಿಂದ ಬಾದಾಮಿ ದೃಶ್ಯಗಳನ್ನು ಬಿಡಿಸಿದ್ದಾರೆ. ಅಚ್ಚೊತ್ತಿದ್ದ ನೆನಪುಗಳು. ಅಲ್ಲೆಲ್ಲಾ ಒಂದು ಚಿತ್ತ ಸ್ಥಿತಿಯ ಭಾವಾಭಿವ್ಯಕ್ತಿ, ಅಥವಾ ರೂಪಕ್ಕೆ ಸಬಂಧಿಸಿದ ಚಿಂತನೆ ಮೂಡಿರುತ್ತದೆ.

## ಬಾದಾಮಿಯ ಗುಹೆಗಳು

ಬೆಟ್ಟಗುಡ್ಡಗಳು ಮಾತ್ರವಲ್ಲ ಬಾದಾಮಿಯ ಗುಹಾದೇವಾಲಯಗಳು ಹಡಪದರಿಗೆ ಎರಡನೆಯ ಮನೆ. ಮನೆಗಿಂತಲೂ ಬಾಲ್ಯದಲ್ಲಿ ಹೆಚ್ಚು ಕಾಲ ಕಳೆಯುತ್ತಿದ್ದದ್ದು ಇಲ್ಲೇ. ವಿದೇಶೀಯರು ಬಂದಾಗ ಅವರ ಹಿಂದೆ ಈ ಬಾಲಕ. ಪ್ರವಾಸಿಗರ ಹಿಂದೆ ಅಲ್ಲ, ಮಾರ್ಗದರ್ಶಿಯಾಗಿ ಅಲ್ಲ. ವಿದೇಶೀ ಕಲಾವಿದರೊಡನೆ ಒಡನಾಟ. ಅವರು ಶಿಲ್ಪಗಳನ್ನು ಪ್ರತಿಕೃತಿ ತೆಗೆಯುವ ವಿಧಾನ, ರೇಖೆಗಳ ಬಳುಕು, ಬೀಸು ಎಲ್ಲದರ ಬಗ್ಗೆ ಕುತೂಹಲ. ಶಾಲೆಯಲ್ಲಿ ಅಲಂಕಾರ ಮಾಡುತ್ತ, ಸರಸ್ವತಿ ಮುಂತಾಗಿ ದೇವತೆಗಳ ಚಿತ್ರ ಬಿಡಿಸುತ್ತಿದ್ದ ಅನುಭವ ವಿಸ್ತಾರವಾಗಿ ಶಿಲ್ಪಗಳ ರೇಖಾಚಿತ್ರ ರಚನೆ ಕಲಿಕೆಯೂ ನಡೆದದ್ದು ಆಶ್ಚರ್ಯವಲ್ಲ. ಅಪೂರ್ವ ಗ್ರಹಣಶಕ್ತಿ ಕಾರಣ ಪ್ರತಿಕೃತಿ ರಚನೆ ಸುಲಭವಾಗಿಯೇ ದಕ್ಕಿತು. ಈ ವಿದೇಶೀ ಕಲಾವಿದರು ಕೊಡುತ್ತಿದ್ದ ಅನಾಟಮಿ ಪುಸ್ತಕಗಳೂ ಕಲಿಕೆಗೆ ನೆರವಾದುವು. ಅವರ ಅಭ್ಯಾಸ ಚಿತ್ರಗಳು ಹಡಪದರಿಗೂ ಅಭ್ಯಾಸ ಮಾದರಿಯಾದವು. ವಿವರಗಳನ್ನು ಬಿಡಿಸುವಿಕೆ, ಕನಿಷ್ಠ ರೇಖೆಗಳಲ್ಲಿ ರಚನಾ ವಿಧಾನ, ಚಾಲುಕ್ಯ ಶೈಲಿಯ ವಿನ್ಯಾಸಗಳು, ಆಕೃತಿಗಳು, ತೆರಪೆಂದರೇನು, ರೂಪಿಕೆಗಳೆಂದರೇನು, ಆಕೃತಿಯನ್ನು ವಿರೂಪಗೊಳಿಸುವ ಬಗೆ, ದೇವ ದೇವತೆಗಳ ವಿವಿಧ ಭಂಗಿಗಳು, ಒಂದು ವೃತ್ತದಲ್ಲಿಯೇ ಬಾಗಿಸಿ ಬಳುಕಿಸಿ ಜೋಡಿ ಆಕೃತಿಗಳನ್ನು ರಚಿಸಿರುವ ಚಾಲುಕ್ಯ ಶಿಲ್ಪಿಗಳ ವಿಸ್ಮಯಕಾರಿ ವಿಧಾನ, ಕೂದಲ ವಿನ್ಯಾಸಗಳು ಇತ್ಯಾದಿ ನೋಡಿ ನೋಡಿ ರೂಢಿಯಿಂದ ಸಹಜವಾಗಿ ಬಂದವು. ಬಂಡೆಗಳ ವಕ್ರತೆ, ಬಳುಕುಗಳು ರೂಢಿಯಾಗಿದ್ದವು. ಪ್ರೌಢಶಾಲೆಗೆ ಬರುವ ಹೊತ್ತಿಗೆ, ಜೇಡಿಮಣ್ಣಿನಿಂದ ಶಿಲ್ಪ ಮಾಡುವುದೂ ರೂಢಿಯಾಗಿತ್ತು. ಮನೆಯಲ್ಲಿ, ಶಾಲೆಯಲ್ಲಿ, ಘನಾಕೃತಿಗಳ ರೂಪಣ, ಹಾಗೇ ಘನಾಕೃತಿಗಳನ್ನು ರೇಖೆಗಿಳಿಸುವ ವಿಧಾನ ಸಹಜವೆಂಬಂತೆ ಬಂದಿತ್ತು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಇದೆಲ್ಲಾ ವೈಚಾರಿಕವಾಗಿ, ಪ್ರಜ್ಞಾಪೂರ್ವಕವಾಗಿ ಕಲಿತದ್ದಲ್ಲ. ಅಂತರ್ಬೋಧೆಯಿಂದ, ಒಳಗಿನ ಒತ್ತಡದಿಂದ, ನಿರಂತರ ಅಭ್ಯಾಸದಿಂದ ಬಂದುವು. ಬಾಲ್ಯದಲ್ಲಿ ಚಿತ್ರ ರಚಿಸುವಾಗ ತೀವ್ರ ಅನುಭವ ಆಗುತ್ತಿತ್ತು. ವಿವರಿಸುವ ಶಕ್ತಿ, ತರ್ಕಬದ್ಧ ಅರಿವು ಇರುತ್ತಿರಲಿಲ್ಲ. ಕಲೆಯ ವ್ಯಾಕರಣ ಗೊತ್ತಿರಲಿಲ್ಲ. ರೇಖಾತ್ಮಕತೆ, ದೃಢ-ಘನ ಗುಣಗಳು ಗುಹಾ ಶಿಲ್ಪಗಳಿಂದ ಬಂದವು.

ಹಡಪದರು ಬೆಂಗಳೂರಿಗೆ ಬಂದ ನಂತರವೂ ಹಲವು ವರ್ಷಗಳು ಬಾದಾಮಿಯ ಶಿಲ್ಪ ಶೈಲಿಯ ಪ್ರಭಾವದಿಂದ ಬಿಡಿಸಿಕೊಳ್ಳಲಾಗಲಿಲ್ಲ. ಈಗಲೂ ಅವರ ರಚನೆಗಳಲ್ಲಿ ಪರೋಕ್ಷವಾಗಿ ಪ್ರಭಾವವಿದೆ. 'ಸಮುದಾಯ' ಪ್ರಾರಂಭಕ್ಕೂ ವರ್ಷಗಳ ಮೊದಲು ಪ್ರಸನ್ನ ಅವರ ಸಂಪರ್ಕ ಆದ ನಂತರವೇ ಉದ್ದೇಶ ಪೂರ್ವಕವಾಗಿ ಆಕೃತಿಗಳನ್ನು ವಿರೂಪಗೊಳಿಸಿ ಹಿಂದಿನ ರೀತಿ.

ಶೈಲಿಗಿಂತ ಭಿನ್ನತೆ ಸಾಧಿಸುವ ಪ್ರಯತ್ನ ಮಾಡಿದುದು. ಕಂಡ, ಗ್ರಹಿಸಿದ ಯಾವುದೇ ಆಕಾರಗಳನ್ನು ಪರಿವರ್ತಿಸಿ ಪುನರ್ ಸೃಷ್ಟಿಸುವ ಪ್ರಜ್ಞಾಪೂರ್ಣ ಪ್ರಯತ್ನಗಳೂ ಅನಂತರದ್ದೇ.

ಆ ಕಾಲದಲ್ಲಿ ವಿದೇಶೀ ಕಲಾವಿದರು, ಕೆಲವೊಮ್ಮೆ ಕಲಾ ಇತಿಹಾಸಕಾರರು ಇವರಿಂದ ಶಿಲ್ಪಗಳ, ರೂಪಿಕೆಗಳ, ವಿನ್ಯಾಸಗಳ ರೇಖಾಚಿತ್ರ ಬರೆಸಿಕೊಳ್ಳುತ್ತಿದ್ದರು. ಇವರ ಕೌಶಲ, ಖಚಿತತೆ, ರೇಖೆಗಳ ದೃಢತೆ, ಪರಿಪೂರ್ಣತೆ ಅವರ ಉದ್ದೇಶಕ್ಕೆ ಅನುಗುಣವಾಗಿದ್ದವು. ಆ ಕಲಾವಿದರೂ ಕರಡು ಚಿತ್ರಗಳನ್ನು ಮಾಡಿಕೊಳ್ಳುತ್ತಿದ್ದರು, ಬಹು ಶೀಘ್ರವಾಗಿ. ಈ ಪ್ರತಿಕೃತಿಗಳನ್ನು ತೆಗೆಯುವುದಕ್ಕೆ ಹಡಪದ್ ಅವರಿಗೆ ಹೆಚ್ಚು ಕಾಲಾವಕಾಶ ಇರುತ್ತಿರಲಿಲ್ಲ. ಬೇಗ ಬೇಗ ಬಿಡಿಸುವುದೇ ಅಭ್ಯಾಸವಾಯಿತು. ಹಡಪದರ ಈ ಸ್ವಭಾವಕ್ಕೆ, ಬಾಲ್ಯದಿಂದ ರೂಢಿಯಾದ ಈ ರಚನಾ ವಿಧಾನಕ್ಕೆ ಇನ್ನೂ ಒಂದು ಹಿನ್ನೆಲೆ, ಕಾರಣವಿದೆ. ಊರಿನಲ್ಲಿ ಒಕ್ಕಲುತನ ಎಲ್ಲರದು. ಶ್ರೀಮಂತರ ಮನೆಯ ಹೆಂಗಸರು, ಬಿಡುವಿರುತ್ತಿದ್ದ ಕಾಲದಲ್ಲಿ ಬಟ್ಟೆ ಚಿತ್ತಾರಗಳಿಗೆ, ರಂಗವಲ್ಲಿಗೆ ಬಗೆ ಬಗೆಯ ವಿನ್ಯಾಸಗಳನ್ನು ಬರೆಸಿಕೊಳ್ಳಲು ಇವರ ಬಳಿ ಬರುತ್ತಿದ್ದರು. ಅವರಿಗೆಲ್ಲಾ ಎದುರಿಗೇ ವಿನ್ಯಾಸ ರಚಿಸಿ ಕೊಡಬೇಕಿತ್ತು. ಒಂದಾದ ಮೇಲೆ ಮತ್ತೊಂದು ಬಗೆ, ಭಿನ್ನವಾಗಿರಬೇಕು. ಹೊಸ ಹೊಸದಾಗಿ ಆಲೋಚನೆ ಮಾಡಿ ರಚಿಸಿ ಕೊಡಬೇಕು. ಅಲ್ಲದೆ ಎಷ್ಟೋ ವೇಳೆ, ರಸ್ತೆಯಲ್ಲೇ ನಿಂತು ಬರೆದು ಕೊಡಬೇಕಿತ್ತು. ಹೀಗಾಗಿ ರೇಖಾಚಿತ್ರವಾಗಲಿ, ವರ್ಣಚಿತ್ರವಾಗಲಿ ವೇಗವಾಗಿ ರಚಿಸುವ ಅಭ್ಯಾಸ ಹಡಪದರಿಗೆ ಬಾಲ್ಯದಿಂದಲೇ ಬಂದದ್ದು. ಇದು ಮುಂದೆ ಅವರಿಗೆ ನಿಸರ್ಗ ದೃಶ್ಯ ರಚನೆಗೆ ಮಾತ್ರ ಸೀಮಿತವಾಗದೆ ಭಾವಚಿತ್ರ, ಸಂಯೋಜನಾ ಚಿತ್ರ ಎಲ್ಲದಕ್ಕೂ ರೂಢಿಯಾಯಿತು. ಬಿ.ಆರ್. ವಿಜಯಕುಮಾರ್ ಹಂಪೆಯಲ್ಲಿ ಹಡಪದ್ ಒಂದು ಭಾವಚಿತ್ರ ರಚಿಸಿದ್ದನ್ನು ವಿವರಿಸಿದ್ದಾರೆ. 'ಸಂಕುಲ' ನಿಯತಕಾಲಿಕೆಯಲ್ಲಿ, 1982-83ರ ಸಮಯ. ಪ್ಯಾರಿಸ್‌ನಲ್ಲಿ ಒಂದು ಕಲಾ ಶಾಲೆಯಲ್ಲಿ ಪ್ರಿನ್ಸಿಪಾಲ್ ಆಗಿದ್ದ ವ್ಯಕ್ತಿ ಎಂಬುದು ಅನಂತರ ತಿಳಿದದ್ದು. ಯಾರು ಏನು ಎಂದು ವಿಚಾರಿಸದೆ ಆತನ ಭಾವಚಿತ್ರವನ್ನು ಅರ್ಧಗಂಟೆಯೊಳಗೆ ರಚಿಸಿದ್ದು ಎಲ್ಲರಿಗೂ ರೋಮಾಂಚಕ ಅನುಭವ, ರೂಪದರ್ಶಿಯಾದ ಆ ವ್ಯಕ್ತಿಯೂ ಸೇರಿದಂತೆ.

ಕಲಾಕೃತಿಗಳ ವೇಗ ರಚನಾ ವಿಧಾನ ಹಡಪದರಿಗೆ ಜೆ.ಜೆ. ಕಲಾಶಾಲೆಯ ಕಲಾ ಶಿಕ್ಷಣದಿಂದ ಬಂದದ್ದು ಎಂದು ಕೆಲವು ವಿಮರ್ಶಕರು ಬರೆದಿದ್ದಾರೆ. ಹಡಪದರು ಜೆ.ಜೆ. ಕಲಾ ಶಾಲೆಗೆ ಹೋಗುವ ಮೊದಲೇ, ಪ್ರೌಢಶಾಲೆಯಲ್ಲಿದ್ದಾಗಲೇ ಈ ರಚನಾವಿಧಾನವನ್ನು ತಮಗಿದ್ದ ಸಾಂದರ್ಭಿಕ ಒತ್ತಡಗಳಿಂದಾಗಿ ರೂಢಿಮಾಡಿಕೊಂಡಿದ್ದರು. ಅದು ಸ್ವಾಭಾವಿಕವಾಯಿತು. ಒಂದು ವಸ್ತು ಅಥವಾ ವಸ್ತುನಿಷ್ಠ ಚಿಂತನೆ, ವಿಚಾರಗಳನ್ನು ಕಡಿಮೆ ಅವಧಿಯೊಳಗೆ ಹೆಚ್ಚು ಪ್ರಮಾಣದಿಂದ ಹೇಳುವ ಸಾಮರ್ಥ್ಯ ಇದು. ಅದು ಒಂದು ಮೂಲಭೂತ ಶಕ್ತಿ. ತೀವ್ರತೆ ಇರುವ ಕಾರಣ ಭಾವಾಭಿವ್ಯಕ್ತಿ ಗುಣ ಅದಕ್ಕಿರುತ್ತದೆ. ಬಿಡಿ ವಿವರಕ್ಕೆ ಹೋಗುವುದು ಯಾಂತ್ರಿಕವಾಗುತ್ತದೆ. ನಿಧಾನವಾಗುತ್ತದೆ. ಒಮ್ಮೊಮ್ಮೆ ನಿಂತದ್ದು - ಚಿಂತನೆ, ವಿಚಾರ - ಮತ್ತೆ

ಚಿಗುರೊಡೆದು ಮುಂದುವರೆಯಬಹುದು, ಇಲ್ಲವೆ ಅಷ್ಟಕ್ಕೆ ಸಾಕು ಎನಿಸಿದರೆ, ಇಷ್ಟು ಅವಧಿಯಲ್ಲಿ ಎಷ್ಟು ಹೇಳಬೇಕಾಗಿದೆಯೊ ಅಷ್ಟು ಹೇಳಿದೆ ಎನಿಸಿದರೆ, ಅಂತಿಮ ಸಂಸ್ಕಾರ ಪಡೆದು ಪೂರ್ಣವಾಗಬಹುದು. ವೇಗ ವಿಧಾನ ಎಂದು ಅದರಲ್ಲಿ ಚಿಂತನೆ, ವಿವೇಚನೆ ಇರುವುದಿಲ್ಲ ಎನ್ನುವಂತಿಲ್ಲ. ಗಮನಿಸಬೇಕಾದ ಅಂಶವೆಂದರೆ ವಿವರ ಇದ್ದರೆ ಅದು ಹೆಚ್ಚು ಪೂರ್ಣ, ಸಮರ್ಪಕ ಎನಿಸಬಹುದು. ಆದರೆ ವಿವರಣೆ ಇಲ್ಲದೆಯೇ ಅದು ಹೇಳಬೇಕಾದ್ದನ್ನು ಸಂವಹನಿಸುವ ಸಾಮರ್ಥ್ಯ ಹೊಂದಿದ್ದರೆ ಉತ್ತಮ ಚಿತ್ರವಾಗುತ್ತದೆ. ಒಂದು ನೃತ್ಯ ನೋಡುತ್ತಾ ಚಿತ್ರಿಸುವುದು, ಭಂಗಿಗಳನ್ನು ಸೆರೆಹಿಡಿಯುವುದು ಅವರಿಗೆ ಸುಲಭ. ಚಂದ್ರಶೇಖರ ಕಂಬಾರರ 'ಜೋಕುಮಾರಸ್ವಾಮಿ' ನಾಟಕ ಪ್ರದರ್ಶಿತವಾಗುತ್ತಿದ್ದಂತೆಯೇ ಕಾಲಬದ್ಧ ನಾಟಕದ ಅಂತರಂಗವನ್ನು, ಕೆನೆರೂಪದ ಸತ್ವವನ್ನು, ಅದರ ವೇಗ ಗತಿ ಸಮೇತ ದೇಶಬದ್ಧವಾಗಿ ವರ್ಣಚಿತ್ರದಲ್ಲಿ ಮೂಡಿಸಿದ್ದಾರೆ. ನೋಟದ essence ಅನ್ನು, ಸತ್ವವನ್ನು ಗ್ರಹಿಸಿ ಪುನರ್ ಸೃಷ್ಟಿಸುವ ಗುಣ ಬಾಲ್ಯದಿಂದ ಬಂದದ್ದು. ಅದು ಒಂದು ರೀತಿಯಲ್ಲಿ ಮಕ್ಕಳಲ್ಲಿರುವ ಶಕ್ತಿ. ಬಿಡಿಯಾಗಿ ಗ್ರಹಿಸದೆ, ಇಡಿಯಾಗಿ ಗ್ರಹಿಸುವ ಶಕ್ತಿ. ಅಧ್ಯಾಪಕರಾಗಿ ಕಲಾ ಶಿಕ್ಷಣ ನೀಡುವಲ್ಲಿ, ಪ್ರಾತ್ಯಕ್ಷಿಕೆಗಳಲ್ಲಿ ಅವರಿಗೆ ಇದು ಪ್ರಯೋಜನಕಾರಿಯೂ ಆಯಿತು.

ಮುಖ್ಯವಾಗಿ ಆಕೃತಿ ಚಿತ್ರಗಳಲ್ಲಿ, ಉಳಿದಂತೆ ಸಂಯೋಜನೆಗಳಲ್ಲಿ ಹಡಪದ್ ಅವರು ವಿನ್ಯಾಸಗಳನ್ನು ಬಳಸುವ ರೀತಿ ವಿಶಿಷ್ಟವಾದ ಅವರ ಶೈಲಿ. ಅಲಂಕಾರ, ವಿನ್ಯಾಸಗಳು ಎಲ್ಲಾ ರಚನೆಗಳಲ್ಲೂ ಸ್ಪಷ್ಟವಾಗಿ ಪ್ರಧಾನವಾಗಿ ಇರುತ್ತವೆ ಎಂದು ಇದರರ್ಥವಲ್ಲ. ಆದರೆ ಆಕೃತಿಗಳ ರಚನೆಯಲ್ಲೇ ವಿನ್ಯಾಸ-ಅಲಂಕಾರಗಳು ಭಾಗವಾಗಿ ಬಿಡುತ್ತವೆ. ಬಹುಶಃ ಇದು ಬಾಲ್ಯದ, ಬಾದಾಮಿ ಗುಹೆಗಳ ಚಾಲುಕ್ಯ ಶಿಲ್ಪಗಳ ಅಭ್ಯಾಸದಿಂದ ರೂಢಿಗತವಾಗಿ ಬಂದಿರಬಹುದು.

ಕೆಲವು ಸರಣಿ ಚಿತ್ರಗಳಲ್ಲಿ, 'ಜೊತೆಗೆ', 'ಮುಖ', 'ಸಂದೇಶ' ಇತ್ಯಾದಿ, ಕೆಲವು ವಿಮರ್ಶಕರು ಜಾನಪದದ ಪ್ರಭಾವವನ್ನು ಗುರುತಿಸಿದ್ದಾರೆ. ಚಿಕ್ಕಂದಿನಲ್ಲಿ ಹಡಪದರು ಗರಡಿ ಮನೆಗಳಲ್ಲಿ, ಗುಡಿಗಳಲ್ಲಿ ಮನೆಗಳ ಗೋಡೆಗಳ ಮೇಲೆ ಚಿತ್ರ ಬಿಡಿಸುತ್ತಿದ್ದುದುಂಟು. ಅಲ್ಲಿ ಸರಳೀಕರಣ, ಚಪ್ಪಟೆ ವರ್ಣಲೇಪ ವಿಧಾನ ಇರುತ್ತಿತ್ತು. ಆಗಿನ ಹಳ್ಳಿಗಳಲ್ಲಿ ರೂಢಿಯಲ್ಲಿದ್ದ ಜಾನಪದ ಕಲೆಯನ್ನು ನೋಡಿದ್ದರು. ಜಾನಪದ ಕಲೆಯೇ ಕಾಲ ಕ್ರಮೇಣ ಪರಿಷ್ಕಾರಗೊಂಡು ಶಿಷ್ಟಕಲೆಯಾಗುತ್ತೆ. ಹಾಗೆ ಪರಿಷ್ಕಾರಗೊಂಡು, ತಾಂತ್ರಿಕವಾಗಿ ಉನ್ನತ ಮಟ್ಟ ಸಾಧಿಸಿದ್ದು ಚಾಲುಕ್ಯ ಕಲೆ. /ಬಾದಾಮಿಯಲ್ಲೆ ಮಣ್ಣೆತ್ತಿನ ಅಮವಾಸ್ಯೆ ಹಬ್ಬ ಬರುತ್ತೆ. ಆಗೆಲ್ಲಾ ಹುತ್ತದ ಮಣ್ಣಿನಿಂದ ಐದು ಅಂತಸ್ತುಗಳ ಮನೆ ಮಾಡುವುದು, ಬಸವಣ್ಣನನ್ನು ಮಾಡುವುದು ಪರಂಪರೆ. ಈ ಎಲ್ಲದಕ್ಕಿಂತ ಚಾಲುಕ್ಯ ಶಿಷ್ಟಕಲೆ ಅವರ ಮೇಲೆ ಪ್ರಭಾವ ಬೀರಿದ್ದು. ಆದರೆ ಅತ್ತ ಜಾನಪದ, ಇತ್ತ ಶಿಷ್ಟ ಎರಡು ಕಲೆಗಳಲ್ಲೂ ಬರುವ ನಾಗ, ಸೂರ್ಯ, ಚಂದ್ರ ಮುಂತಾದ ರೂಪಿಕೆಗಳನ್ನು, motifಗಳನ್ನು ಹಡಪದರ ಕಲಾಕೃತಿಗಳಲ್ಲಿ ಕಾಣಬಹುದು. ಇವುಗಳಲ್ಲದೆ ಪ್ರತ್ಯೇಕ ಜಾನಪದ ಪ್ರಭಾವ ಅವರಲ್ಲಿ ಕಾಣಬರುವುದಿಲ್ಲ.

# 2

Painters, as well as composers, were fascinated by the excitement of modern city life with its ever-changing patterns of light and rhythm.

- Arnold Schoenberg

## ನಗರದ ಬೆಳಕು

ಬೆಂಗಳೂರಿಗೆ ಹಡಪದ್ ಅವರು ಬಂದದ್ದು 1961ರಲ್ಲಿ. 1958-59ರಲ್ಲಿ ಎ.ಎಂ. ಮುಗಿಸಿ ಮಿಣಜಿಗಿಯವರ ಕಲಾಮಂದಿರದಲ್ಲಿ ಕಲಾಶಿಕ್ಷಕರಾಗಿ ಎರಡು ವರ್ಷ ಇದ್ದರು. ಹೈಸ್ಕೂಲಿನಲ್ಲಿ ಸೇವೆಯಲ್ಲಿರುವ ಅಧ್ಯಾಪಕರಿಗಾಗಿ ಬೆಂಗಳೂರಿನಲ್ಲಿ ಮಿಣಜಿಗಿಯವರು ಒಂದು ಶಾಖೆ ತೆರೆದರು. ಒಬ್ಬಿಬ್ಬರು ಅಲ್ಲಿ ಬಂದು ನಿಭಾಯಿಸಲಾಗದಾಗ ಹಡಪದ್ ಅವರನ್ನು ಬೆಂಗಳೂರಿಗೆ ಕಳಿಸಿದರು. ಹೀಗೆ ಹಡಪದ್ ಕಲಾ ಶಿಕ್ಷಕರಾಗಿಯೇ ಬೆಂಗಳೂರಿಗೆ ಬಂದದ್ದು. ಬಾದಾಮಿಯ ನಂತರ ಬೆಂಗಳೂರು ಅವರ ಎಲ್ಲ ಚಿಂತನೆ, ಪ್ರಯೋಗ, ಸಾಧನೆಗಳ, ಬದುಕಿನ ಕಹಿ-ಸಿಹಿಗಳ ತವರಾಯಿತು.

ಡಿಪ್ಲೋಮಾ ನಂತರದ ಮೂರು ವರ್ಷಗಳ ಕಲಾ ಶಿಕ್ಷಣ ಅವರು ಮುಂಬಯಿ ಜೆ.ಜೆ.ಕಲಾ ಶಾಲೆಯಲ್ಲಿ ಪಡೆದರು. ಅದು ಆ ಕಾಲಕ್ಕೆ ಉನ್ನತ ಶಿಕ್ಷಣವೆ. ಆ ದೃಷ್ಟಿಯಿಂದ ಅವರು ಜೆ.ಜೆ.ಕಲಾ ಶಾಲೆಯ ವಿದ್ಯಾರ್ಥಿ. ವಾಸ್ತವವಾಗಿ ಅಲ್ಲಿಯ ಕಲಾ ಪದ್ಧತಿ, ಶೈಲಿಯ ಪರಂಪರೆ ಅವರ ಮೈ ಮನಗೂಡಬೇಕಿತ್ತು. ಹಾಗಾಗಲಿಲ್ಲ. ಅವರು ಶಾಲೆಯಲ್ಲಿ ಕಲಿತದ್ದಕ್ಕಿಂತ ಹೊರಗಡೆ ಕಲಿತದ್ದೆ ಹೆಚ್ಚು. ಪರೀಕ್ಷಾ ದೃಷ್ಟಿಯಿಂದ ವಾಸ್ತವವಾದೀ ಹಾಗೂ ಅಲಂಕಾರಿಕ ಪದ್ಧತಿಯಲ್ಲಿ ಕಲಿಕೆ. ಭಾರತೀಯ ಪದ್ಧತಿ ಎಂದು ಕರೆಯುತ್ತಿದ್ದರೂ ತಾಂತ್ರಿಕ ದೃಷ್ಟಿಯಿಂದ ಸಾವಿರಾರು

ವರ್ಷಗಳು ನಡೆದು ಬಂದ ಭಾರತೀಯ ಕಲೆಯ ಬೆಳವಣಿಗೆ ವಿಶ್ಲೇಷಣೆ ಇತ್ಯಾದಿಗಳ ಅರಿವು ಮೂಡಿಸುತ್ತಿರಲಿಲ್ಲ. ಹೀಗಾಗಿ ನಿಖರವಾದ ಲಕ್ಷಣಗಳ ಅರಿವಾಗಲಿಲ್ಲ. ಕಥೆಗಳು, ಪುರಾಣಗಳು ಇತ್ಯಾದಿ. ಒಂದು ಕಲಾ ಶೈಲಿ ಹೊಸ ಆವಿಷ್ಕಾರವಾಗಿ ಕಾಣಿಸಿಕೊಳ್ಳುವುದಿಲ್ಲ. ಪರಂಪರೆಯಲ್ಲಿ ಸಂಸ್ಕಾರಗೊಳ್ಳುತ್ತ, ಪರಿಷ್ಕಾರಗೊಳ್ಳುತ್ತಾ ಬದಲಾಗುತ್ತದೆ. ಪ್ರಮುಖ ಕಾಲಾವಧಿಯಲ್ಲಿ ಭಿನ್ನ ಲಕ್ಷಣಗಳು ಸ್ಪಷ್ಟ ಗೋಚರವಾಗುತ್ತವೆ. ಮುಂಬಯಿಯ ಶಾಲೆಯಲ್ಲಿ ವಸ್ತುವನ್ನು ಕಾವ್ಯಮಯವಾಗಿ, ಗೀತಾತ್ಮಕವಾಗಿ ಚಿತ್ರಿಸಿದರೆ ಬೆಲೆ, ಗೌರವ. ಮಳೆಗಾಲ ಎಂದರೆ ಹೊಲ, ಎತ್ತುಗಳು, ಮೋಡ, ಮಳೆಗಳು. ಕಾವ್ಯಮಯವೆಂದರೆ ಮದ್ದಾನೆಯಂತೆ ಇಳಿದು ಬರುವ ಮೋಡಗಳು, ಹಿಂದೊಬ್ಬ ಭರ್ಜಿ ಖಡ್ಗ ಗುರಾಣಿ ಹಿಡಿದು ಬರುವ ವ್ಯಕ್ತಿ. ಇದು ಕಲ್ಪನೆ, ಇದು ಸಂಯೋಜನೆ. ಇದಕ್ಕೆ ಮೆಚ್ಚುಗೆ. ಸಾಹಿತ್ಯದಂತೆ ಕಲೆಗೂ ಒಂದು ಭಾಷೆಯಿದೆ, ಶಬ್ದಗಳಿವೆ, ವಾಕ್ಯಗಳಿವೆ. ಅವುಗಳ ಜೋಡಣೆಯಂತೆ ಭಾಷೆ. ಅದು ವ್ಯಕ್ತಿಗತ. ಚಿತ್ರಕಲೆಯದು ದೃಶ್ಯಭಾಷೆ ಆ ಭಾಷೆಯ ಅರಿವು ಹಡಪದರಿಗೆ ಅಲ್ಲಾಗಲಿಲ್ಲ. ವಾಣಿಜ್ಯಕಲೆಗೆ ಬೇಡಿಕೆ ಇತ್ತು. ಇವರ ಮನಸ್ಸು ಒಪ್ಪಲಿಲ್ಲ. ತಲೆ ತುಂಬ ಪ್ರಶ್ನೆಗಳನ್ನು ತುಂಬಿಕೊಂಡಿದ್ದ ಇವರಿಗೆ ಉತ್ತರ, ವಿವರ, ಸಮಾಧಾನ ನೀಡುವವರು ಬೇಕಿತ್ತು. ಶಾಲೆಯ ಹೊರಗೆ ದಂಡಾವತಿ ಮಠರ ನೂತನ ಕಲಾ ಶಾಲೆಯಲ್ಲಿ ಪರೀಕ್ಷಾ ದೃಷ್ಟಿಯಿಂದ ಅನುಕೂಲವಾದ ಅನೇಕ ಸೂಕ್ಷ್ಮಗಳು ತಿಳಿಯುತ್ತಿದ್ದವು. ಕಿರ್ಲೋಸ್ಕರ್ ಮ್ಯಾಗ್‌ಜೀನ್‌ಗೆ ಕೆಲಸ ಮಾಡುತ್ತಿದ್ದ ಗುಜ್ಜಾರ್ ಸ್ಟುಡಿಯೋ. ಹೀಗೆ ಹೊರಗಡೆ ಅವರ ರಚನಾ ವಿಧಾನಗಳನ್ನು ನೋಡಿ ತಿಳಿಯುವುದು. ಕೆಲವೊಮ್ಮೆ ಶಾಲೆಯ ವಿಶೇಷ ಉಪನ್ಯಾಸಗಳು ವರದಾನವಾಗುತ್ತಿದ್ದವು, ಇವರ ಹಸಿವಿಗೆ. ಧೂಪೇಶ್ವರ್ ಸಂಯೋಜನೆ ಬಗ್ಗೆ ನೀಡಿದ ಉಪನ್ಯಾಸ, ವಿಶ್ಲೇಷಣೆ, ವಿವರಗಳು ಉತ್ತಮ ಮಟ್ಟದವಾಗಿದ್ದವು. ಹೀಗಾಗಿ ಜೆ.ಜೆ.ಕಲಾ ಶಾಲೆಯದು ಒಂದು ಬಗೆಯ ಅಕಾಡೆಮಿಕ್ ವಾತಾವರಣವೆ, ಓಲ್ಡ್ ಮಾಸ್ಟರ್‌ಗಳ ಪರಂಪರೆಯ ದೃಷ್ಟಿಯೆ.

ಹಡಪದ್ ಅವರದು ಕಲೆಯ ವಿಷಯದಲ್ಲಿ ಯಾವುದನ್ನೇ ಆದರೂ ಕೆದಕುವ, ಬೆದಕುವ (ಹುಡುಕಾಟ) ಸ್ವಭಾವ. ರೂಢಿಗತವಾದದ್ದನ್ನೂ ಪ್ರಶ್ನಿಸುವ ಪ್ರವೃತ್ತಿ ಬಾದಾಮಿ ಕಾಲದಿಂದ ಬಂದದ್ದು ಎಂಬುದನ್ನು ವಿಮರ್ಶಕರು ಗುರುತಿಸಿದ್ದಾರೆ. ಅಕಾಡೆಮಿಕ್ ವಾಸ್ತವವಾದೀ ಶೈಲಿ ಮತ್ತು ಬಂಗಾಲಿ ನವೋದಯ ಶೈಲಿಯ ಕಲೆಯ ಹೊರಗೆ ಕರ್ನಾಟಕದಲ್ಲಿ ಹೊಸ ಒಲವುಗಳ ಅರಿವು ಇಲ್ಲದಿದ್ದ ಕಾಲದಲ್ಲಿ ಹಡಪದ್ ಕ್ರಿಯಾಶೀಲರಾದರು ಎಂದು ಕಲಾವಿಮರ್ಶಕಿ ಮಾರ್ಥಾ ಹೇಳಿದ್ದಾರೆ. ರೂಢಿಗತ, ಪ್ರಚಲಿತ, ಒಪ್ಪಿತ ಎಂದಾಕ್ಷಣ ತಲಸ್ಪರ್ಶಿಯಾಗಿ ತಿಳಿಯದೆ ಸ್ವೀಕರಿಸದ, ರೂಢಿಯನ್ನು ಪ್ರಶ್ನಿಸುವ ಹಡಪದರ ಪ್ರವೃತ್ತಿ ತೀವ್ರವಾಗಿ ಬೆಳೆದದ್ದು ವಿ.ಕೆ. ಪಾಟೀಲ್ ಎಂಬ ಶಾಲಾ ಕಲಾ ಇನ್‌ಸ್ಪೆಕ್ಟರ್ ಅವರಿಂದ. ಮುಂಬಯಿಯಿಂದ ಕರ್ನಾಟಕಕ್ಕೆ ಬಂದ ಅವರು ಹಡಪದರನ್ನೂ ಶಾಲಾ ಇನ್‌ಸ್ಪೆಕ್ಷನ್ ಮಾಡುವುದಕ್ಕೆ ಜೊತೆಗೆ ಒಯ್ಯುತ್ತಿದ್ದರು. ಶಾಲೆಗಳ ಪ್ರವಾಸ ಮುಂಬಯಿ ಕರ್ನಾಟಕದಲ್ಲಿ, ಕಲಾ ಶಿಕ್ಷಣದ ಸ್ಥಿತಿಯಿಂದ ನೊಂದು ಅವರು

ನೀಡುತ್ತಿದ್ದ ಸೂಚನೆಗಳು, ವಿವರಿಸುತ್ತಿದ್ದ ರೀತಿ ಒಬ್ಬ ಆಧುನಿಕ ಸಂವೇದನೆಯುಳ್ಳ ವಿಮರ್ಶಕನದಾಗಿತ್ತು. ಕಲೆಯಲ್ಲಿ ಆಧುನಿಕ ದೃಷ್ಟಿ ಮೂಡಬೇಕೆಂಬ ಆಶಯ. ಅವರ ಮಾತು, ವಿವರಣೆಗಳು ಇನ್ನೂ ವಿದ್ಯಾರ್ಥಿಯಾಗಿದ್ದ ಹಡಪದರನ್ನು ಯೋಚಿಸಲು ತೊಡಗಿಸುತ್ತಿದ್ದುವು. ಹಕ್ಕಿಗೆ ಕಲ್ಲು ಹೊಡೆಯುತ್ತಿರುವ ಮನುಷ್ಯ ಎಂದರೆ ಚಿತ್ರದಲ್ಲಿ ಮನುಷ್ಯನ ವಿವರ ಇರಲೇಬೇಕೆಂದಿಲ್ಲ. ಕಲೆ ಛಾಯಾಚಿತ್ರ ಅಲ್ಲ. ಅಗತ್ಯಕ್ಕೆ ತಕ್ಕಂತೆ ಒಂದು ಗೆರೆಯೂ ಆ ಕಾರ್ಯ ಪೂರೈಸಬಲ್ಲುದು ಎಂಬ ಸೂಚನೆ ಇವರ ಆಲೋಚನೆಗಳನ್ನು ಬೇರೆ ದಿಕ್ಕಿಗೇ ಒಯ್ಯುತ್ತಿದ್ದುವು. ರೂಢಿಗತವಾದದ್ದರ ಬಗೆಗೂ ಪುನರಾಲೋಚನೆ ಮಾಡಬೇಕು ಎನಿಸಿತು. ಇದೊಂದು ಪ್ರವೃತ್ತಿಯಾಗಿ ಹಡಪದರು ಸದಾ ಪ್ರಯೋಗಶೀಲರು ಎಂದು ಜನ ಭಾವಿಸುವಂತಾಯಿತು. ಕಲೆಯ ಬಗೆಗಿನ ಹಳೆಯ ದೃಷ್ಟಿ, ನಂಬಿಕೆಗಳನ್ನೇ ಸವಾಲಗಿ ಸ್ವೀಕರಿಸಿದರು. ವಾಸ್ತವವಾದೀ ಅಕಾಡೆಮಿಕ್ ಕಲೆಯಿಂದ ನವ್ಯಕ್ಕೆ ಹಡಪದರು ಹೊರಳಲು ಬಹುಶಃ ವಿ.ಕೆ. ಪಾಟೀಲರ ಚಿಂತನಾ ವಿಧಾನ ಕಾರಣ ಎನ್ನಬಹುದು.

ಬೆಂಗಳೂರಿಗೆ ಬಂದ ಮೇಲೆ ಹಡಪದರನ್ನು ರೂಪಿಸಿದ ಇನ್ನೊಂದು ಸ್ಥಳ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್. ಅಲ್ಲಿ ಉತ್ತಮ ಪುಸ್ತಕ ಭಂಡಾರವಿತ್ತು. ಅಮೂಲ್ಯ ಕಲಾ ಗ್ರಂಥಗಳಿದ್ದುವು. ಯಾರೂ ಬಳಸದೆ ಧೂಳು ತುಂಬಿದ್ದುವು. ಆ ಗ್ರಂಥಗಳ ಅಧ್ಯಯನಕ್ಕೆ ತೊಡಗಿದರು. ಒಬ್ಬೊಬ್ಬ ಕಲಾವಿದನ ಬಗೆಗೂ ಸಮಗ್ರ ಅಧ್ಯಯನ. ಮತ್ತೊಬ್ಬ ಕಲಾವಿದನನ್ನು ಅರಿತುಕೊಳ್ಳುವುದೆಂದರೆ ಕೇವಲ ನಕಲು ಮಾಡುವುದಿಲ್ಲ. ಅವನ ಆಲೋಚನಾ ಕ್ರಮ, ಅಭಿವ್ಯಕ್ತಿ ರೀತಿ, ಸಂಯಮಗಳ ಅರಿವು. ಅವರ ಬಗ್ಗೆ ತಿಳಿಯುತ್ತಲೇ ತಾನು ಹೇಗೆ ಭಿನ್ನ, ಅವರು ಅರಸಿದ ಸಾಧ್ಯತೆಗಳಲ್ಲಿ, ತನ್ನತನ ಉಳಿಸಿಕೊಂಡು ಯಾವ ಅಂಶಗಳನ್ನು ಸ್ವೀಕರಿಸಬಹುದು ಎಂಬ ವಿಚಾರ ವಿಮರ್ಶೆ, ಆತ್ಮಾವಲೋಕನಕ್ಕೆ ತೊಡಗಿದ್ದು ವರ್ಲ್ಡ್ ಕಲ್ಚರ್ ಸಂಸ್ಥೆಯಲ್ಲಿ. ಅಲ್ಲಿಯ ವೆಂಕಟರಾಮನ್ ತುಂಬ ಪ್ರೋತ್ಸಾಹವಿತ್ತರು, ಯುವ ಕಲಾವಿದನ ಗಂಭೀರ ಆಸಕ್ತಿ ಕಂಡು ಅಲ್ಲೇ ಸ್ಕೆಚ್ ಮಾಡಲು, ಚಿತ್ರ ರಚಿಸಲು ಅವಕಾಶ ಮಾಡಿಕೊಟ್ಟರು.

ಪರಿಚಿತ ಸಾಹಿತ್ಯ ಮಿತ್ರರೊಂದಿಗಿನ ಚರ್ಚೆ, ವಿಮರ್ಶೆಗಳು ಮತ್ತೊಂದು ಬಗೆಯ ವಿಚಾರ ಸರಣಿಗೆ ಅವಕಾಶವಿತ್ತವು. ಆಗ ಬಹುವಾಗಿ ಚರ್ಚೆಯಲ್ಲಿದ್ದ ಅಡಿಗ, ನರಸಿಂಹಸ್ವಾಮಿ ಮುಂತಾದವರ ಕಾವ್ಯ, ಇತರ ಸಾಹಿತ್ಯ ಕೃತಿಗಳ ಬಗ್ಗೆ ವಿಮರ್ಶೆ. ಸಾಹಿತ್ಯ ಚರ್ಚೆಯಲ್ಲಿ ಬರುತ್ತಿದ್ದ ವಿಚಾರಗಳು ಎಷ್ಟರಮಟ್ಟಿಗೆ ಕಲೆಗೂ ಅನ್ವಯವಾಗಬಹುದು, ಅಂತಹ ಹೊಸ ಚಿಂತನಾ ಕ್ರಮ ಇಲ್ಲಿ ಸಾಧ್ಯವಿಲ್ಲವೇ ಎಂಬುದು ಹಡಪದರ ಆಲೋಚನೆ. ಆ ವೇಳೆಗಾಗಲೇ ಆನಂದ ಕುಮಾರಸ್ವಾಮಿ, ಮುಲ್ಕ್‌ರಾಜ ಆನಂದ್ ಹೊಸ ನೋಟದ ಸಾಧ್ಯತೆಗಳನ್ನು ತೋರಿದ್ದರು. ಸಾಹಿತ್ಯ, ಕಲೆ ಬಗ್ಗೆ ಅಲ್ಲದೆ ಮನೋವಿಜ್ಞಾನ ಮತ್ತು ಕಲಾ ಶಿಕ್ಷಣದ ಬಗ್ಗೆ ಅಧ್ಯಯನ ಮಾಡಿದ್ದು ಆಗಲೇ.

ಬೆಂಗಳೂರಿಗೆ ಬಂದ ಮೂರು ವರ್ಷಗಳ ನಂತರ 23ನೇ ಡಿಸೆಂಬರ್ 1963ರಲ್ಲಿ

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿ ಹಡಪದರ ಮೊದಲ ಏಕ ವ್ಯಕ್ತಿ ಕಲಾ ಪ್ರದರ್ಶನ. ಆ ಪ್ರದರ್ಶನದ ಕೃತಿಗಳು ಬಹುವಾಗಿ ಪಾರಂಪರಿಕ ಭಾರತೀಯ ಶೈಲಿಯವು. ಕೆಲವು ಹಳೆಯ ಶೈಲಿಯಿಂದ ಹೊರ ಬರುವ ಪ್ರಯತ್ನದವೂ ಇದ್ದವು. ರೇಖಾತ್ಮಕ ಶೈಲಿ, ಕಾಲ್ಪನಿಕ ವಸ್ತು. ರೇಖಾ ಚಿತ್ರವಲ್ಲದೆ ವರ್ಣಚಿತ್ರಗಳಲ್ಲೂ ರೇಖೆಗೇ ಪ್ರಾಧಾನ್ಯ – ಅಜಂತ ಮತ್ತು ಚಿಕಣಿ ಚಿತ್ರಗಳಂತೆ. ಪರಂಪರೆಯಿಂದ ಭಿನ್ನವಾಗುವ ಪ್ರಯತ್ನಗಳೆಂದರೆ ಅಲಂಕಾರಗಳನ್ನು ಕಡಿಮೆ ಮಾಡುವುದು, ಆಕೃತಿಗಳನ್ನು ಸರಳೀಕರಿಸುವುದು. ನಿರೂಪಣೆಯಲ್ಲಿ ಒತ್ತುಗಳನ್ನು ವ್ಯತ್ಯಸ್ತಗೊಳಿಸುವುದು, ಉದ್ದೇಶಕ್ಕೆ ತಕ್ಕಂತೆ ಬದಲಿಸುವುದು. ಆಗ ರಚಿಸಿದ 'ಕರಗ' ಚಿತ್ರದಲ್ಲಿ ಬದಲಾವಣೆಯ ಅಂಶಗಳು ಗೋಚರವಾಗುತ್ತವೆ. ಕರಗ ಹೊತ್ತವರು ಸ್ಫುಟ, ಉಳಿದ ಹಿನ್ನೆಲೆ ತಗ್ಗಿಸಿದ್ದು. ಬೇಟೆ ಚಿತ್ರಗಳು, ಬಾಲ್ಯದ ಅನುಭವ. ಹಂದಿಗಳ ಕೋರೆಹಲ್ಲುಗಳ ಹೊಡೆತಕ್ಕೆ ಬೇಟೆನಾಯಿಗಳೇ ತತ್ತರಿಸಿ ಬೀಳುವ ದೃಶ್ಯ.

ಹಡಪದರು ಹಳೆಯದರಿಂದ ಭಿನ್ನವಾಗುವ, ತುಳಿದ ಜಾಡಿನಿಂದ ಹೊಸ ಹಾದಿಗೆ ಹೊರಳುವ ಮಾರ್ಗಗಳ ಬಗ್ಗೆ ಆಲೋಚನೆಗೆ ತೊಡಗಿದರು. ಎಲ್ಲರೂ ಹೂವು ರಚಿಸುತ್ತಾರೆ. ಮುಳ್ಳು ರಚಿಸಬಾರದೇಕೆ? ಮುಳ್ಳಿನ ತಂತಿಯ ಸಿಂಬಿ ರೇಖಾತ್ಮಕ, ಅದನ್ನು ಘನವಾಗಿ, solid ಆಗಿ, ಮೂರು ಆಯಾಮ ತರಬಹುದಲ್ಲವೇ? ಮುಳ್ಳುಗಳ ಪಂಜರದ ಒಳಗೆ ಹೂವು ಅರಳಬಹುದಲ್ಲವೆ? ಕೆಂಪು ಹೂಗಳ ತೋಟದ ಪರಿಣಾಮ ಆಕರ್ಷಕ. ಬೆಂಕಿ ಬಿದ್ದರೆ ಹೇಗೆ; ಅರಳಿದ ಹೂಗಳು ಬೆಂಕಿ ಹೊತ್ತಿ ಉರಿಯುವ ಬಗೆ. ಇಂತಹ ಅನೇಕ ಚಿತ್ರಗಳಿವೆ.

ಪ್ರಯೋಗಶೀಲ ಮನಸ್ಸಿಗೆ ಅನಂತ ಅವಕಾಶಗಳು. ಹಡಪದರು ಮುಂದೆ ಕಲಾ ಪ್ರದರ್ಶನಕ್ಕೆ ಚಿತ್ರ ಸರಣಿಗೆ ತೊಡಗಿದರು. 'ನಗರ' ಚಿತ್ರಸರಣಿ. ವಿಷಯದಂತೆ ತಂತ್ರವಿಧಾನಗಳೂ ಭಿನ್ನ. ಕೇವಲ ಘನಾಕೃತಿಗಳು, blocks, ಚೌಕ ಆಯತಾಕಾರಗಳು, ಇವುಗಳಿಂದಲೇ ರಚನೆ, ಕಟ್ಟಣೆ. ಚಿತ್ರ ಚಿತ್ರಕ್ಕೆ ಸಂಯೋಜನೆಯಲ್ಲಿ ವ್ಯತ್ಯಯಗಳು – ಅದರಿಂದ ವಿಭಿನ್ನ ಮೂಡ್‌ಗಳು. ಹಾಗೆ ನೋಡಿದರೆ ಹಡಪದರಿಗೆ ಇದು ನಗರದ ಹೊಸ ಅನುಭವವಲ್ಲ. ಬಾದಾಮಿ ಬೆಟ್ಟಗಳ ಮೇಲೆ ನಿಂತು ನೋಡಿದಾಗ ಮನೆಗಳೆಲ್ಲಾ ಬ್ಲಾಕ್‌ಗಳಾಗಿ, ಪ್ಯಾಚ್‌ಗಳಂತೆ ಅಮೂರ್ತವಾಗಿ ಕಾಣುವ ಅನುಭವವೇ ನಗರದ ಅನುಭವಕ್ಕೆ ಪ್ರೇರಣೆ. ರಾತ್ರಿ ವೇಳೆ ಬೆಳಕು ಬಿದ್ದಾಗ ವೈವಿಧ್ಯಪೂರ್ಣ ನೆರಳುಗಳ ಆಟ, ಚೌಕ ತ್ರಿಕೋನ ಜ್ಯಾಮಿತೀಯ ಆಕಾರಗಳು. ಈ ಸರಣಿಯ ರಚನೆಯಲ್ಲಿ ಕೃಷನ್ ಖನ್ನಾ ಪ್ರಭಾವವಿದೆಯೆಂದು 'ನಾವು ನಾಲ್ವರು' ಪ್ರದರ್ಶನ ಸಂದರ್ಭದಲ್ಲಿ ಜಿ. ವೆಂಕಟಾಚಲಂ ಬರೆದರು. ಹಡಪದರಿಗೆ ಆಗ ಖನ್ನಾ ಯಾರು ಎಂಬುದು ಗೊತ್ತಿರಲಿಲ್ಲ. ವಾಸ್ತವವಾಗಿ ಬೇರುಗಳು ಬಾದಾಮಿಯವು. ಇನ್ನೊಂದು ಸರಣಿ ಗಾಜು ಕಿಟಕಿಗಳು. ಲಕ್ಸುರಿ ಬಸ್‌ಗಳ ಅಪಾರದರ್ಶಕ ಕಿಟಕಿ ಗಾಜುಗಳ ಮೇಲೆ ಸೂರ್ಯನ ಬೆಳಕು ಬಿದ್ದಾಗಿನ ದೃಶ್ಯಾನುಭವಗಳು. ಮುಚ್ಚಿದ, ತೆರೆದ ಕಿಟಕಿಗಳ ವಿವಿಧ ವಿನ್ಯಾಸ. ಹಗಲು ಮತ್ತು ಇರುಳುಗಳಲ್ಲಿನ ದೃಶ್ಯ ವ್ಯತ್ಯಾಸಗಳು.

ಬೆಂಗಳೂರು ಜಯನಗರ ಅಶೋಕ ಪಿಲ್ಲರ್ ಬಳಿಯ ಕನಕನ ಪಾಳ್ಯದಿಂದ [illegible] ಗವಿಪುರಂಗೆ ಮನೆ ಬದಲಾಯಿಸಿದರು. ಅಲ್ಲಿ ಕೆಂಪಾಂಬುಧಿ ಕೆರೆ. ತುಂಬಿದ ನೀರು, ಆಚೆಗೆ ಚಾಮರಾಜಪೇಟೆ. ರಾತ್ರಿ ವೇಳೆ ಪ್ರಶಾಂತ ವಾತಾವರಣದಲ್ಲಿ ನಗರದ ದೀಪಗಳ ಬೆಳಕು ಪ್ರತಿಫಲಿತವಾಗುತ್ತಿದ್ದವು. ತೆರೆಗಳು ಅಲುಗಿದಂತೆ, ಬೆಳಕಿನ ಬಿಂಬಗಳ ಕಂಪನ. ಸುಂದರ, ಶ್ರೀಮಂತ, ಚಿತ್ತಾಕರ್ಷಕ ದೃಶ್ಯಾನುಭವ. ಆ ಅನುಭವಗಳನ್ನು ಆಧರಿಸಿ ಹಡಪದ್ ''ನೈಟ್'' ಸೀರೀಸ್ ಚಿತ್ರಗಳನ್ನು ರಚಿಸಿದರು. ತೈಲವರ್ಣದ ವಿವಿಧ ಮೈವಳಿಕೆ ತಂತ್ರದ ಚಿತ್ರಗಳು. ಇಲ್ಲಿ ಬ್ಲಾಕ್‌ಗಳು, ಘನಾಕಾರಗಳು ಜಿಗ್‌ಜಾಗ್ ಆಗಿ ಮೂಡಿಬರುತ್ತವೆ; ಸರ್ಪಗತಿ, ವಕ್ರತೆಗೆ ಬದಲು ಕೋನಗಳು. ಬಾದಾಮಿ ಬಂಡೆಗಳಲ್ಲೆ, ಅವುಗಳ ಮೇಲೆ ಮೂಡುವ ಬಣ್ಣದ ಪ್ಯಾಚ್‌ಗಳಂತೆ ಹಡಪದ್ ಅಮೂರ್ತ ವಿನ್ಯಾಸಗಳನ್ನು ಗ್ರಹಿಸಿದ್ದರು. ನಿಸರ್ಗದಲ್ಲೇ ಅಮೂರ್ತತೆ, ಜ್ಯಾಮಿತೀಯ ಆಕಾರಗಳಿವೆ. ಕಲಾವಿದನ ಕಣ್ಣು ಒಳಗಿನ ಅಭಿರಚನೆಗಳನ್ನು, pattern, ಗ್ರಹಿಸಬೇಕಷ್ಟೆ. ಒಂದು ಕಡೆ ನಿಸರ್ಗ ಸೃಷ್ಟಿ, ಇನ್ನೊಂದು ಮನುಷ್ಯ ಸೃಷ್ಟಿ. ಸಮಾನಾಂತರವಾದ ಎರಡನ್ನೂ ಸಂಯೋಜಿಸುವ ಚಿಂತನೆ ಹಡಪದ್ ಅವರ ಈ ಸರಣಿಯಲ್ಲಿ ಕಾಣಬರುತ್ತದೆ. ಎರಡು ಪರಸ್ಪರ ಹೊಂದಿ ಸಂಬಂಧ ಪಡೆದಾಗ ಬೇರೊಂದು ಹೊಸ ಅನುಭವ.

ವರ್ಣಚಿತ್ರಗಳಲ್ಲದೆ ಈ ಅವಧಿಯಲ್ಲಿ ಅನೇಕ ರೇಖಾಚಿತ್ರಗಳನ್ನು ರಚಿಸಿದರು. ಇಂಡಿಯಾ ಇಂಕ್ ರಂಚನೆಗಳು. ಹಡಪದ್‌ರಿಗೆ ಕಪ್ಪು ಬಣ್ಣದ ಬಗ್ಗೆ ಒಲವರ. ಕಪ್ಪು ಬಣ್ಣದಲ್ಲೇ ಎಲ್ಲಾ ಬಣ್ಣಗಳು ಅಡಗಿವೆ ಎಂದು. ಅವರ ವರ್ಣಚಿತ್ರಗಳಲ್ಲೂ ಕಪ್ಪು, ನೀಲಿಯ ಛಾಯೆಗಳಿಗೆ ಪ್ರಾಧಾನ್ಯ. ಬಾಹ್ಯರೇಖೆಗಳ ಒತ್ತಿನಲ್ಲಿ ಆಕಾರ, ಆಕೃತಿಗಳನ್ನು ಪ್ರೇಕ್ಷೇಪಿಸುವಲ್ಲಿ ಕಪ್ಪು ರೇಖೆ ಛಾಯೆಗಳ ಬಳಕೆ.

# 3

Every lively branch of knowledge attracts a few men of outstanding enterprise who are able to take some control of its direction and to respond positively to the challenges that the present inherits from the past. Such persons think more deeply and question accepted theory and practice more searchingly. If a culture is not to be entirely static they are a necessity.

- R.H. Robins

## ನಾವು ನಾಲ್ವರು

ಸರಳತೆ, ಮುಗ್ಧತೆ, ಪ್ರಾಮಾಣಿಕತೆ ಇವು ಹಡಪದರಿಗೆ ಬಾಲ್ಯದಿಂದ ಬಂದ ಗುಣಗಳು. ಇಂದಿಗೂ ಉಳಿದು ಬಂದಿವೆ. ಜೊತೆಗೆ ಸ್ವಂತ ಸುಖ ಸೌಲಭ್ಯ, ವೈಯುಕ್ತಿಕ ಬದುಕಿನಲ್ಲಿ ಸ್ವಲ್ಪವಾದರೂ ಭದ್ರತೆ ಕಡೆ ಗಮನ - ಇವೆಲ್ಲವನ್ನು ನುಂಗುವಂತಹ ಕಲೆಯ ಗೀಳು ಅವರದು. ಈ ಗೀಳಿನ ಬಗೆ ಬೇರೆ. ಸ್ವಂತ ಉತ್ಕರ್ಷಕ್ಕಾಗಿ, ಲಾಭಕ್ಕಾಗಿ, ಕೀರ್ತಿಗಾಗಿ ಅಲ್ಲ. ಹಡಪದ್ ಮಾರಾಟ ದೃಷ್ಟಿಯಿಂದ ಎಂದೂ ಕಲಾ ಸೃಷ್ಟಿ ಮಾಡಲಿಲ್ಲ. ಹಲವು ಕೃತಿಗಳು ಮೆಚ್ಚುಗೆ ಪಡೆದಾಗಲೂ, ವಿದೇಶೀಯರು ಹೊಗಳಿ ಕೊಂಡುಕೊಂಡಾಗಲೂ, ಮತ್ತೆ ಅದೇ ಮಾದರಿ, ಶೈಲಿಯ ಚಿತ್ರಗಳನ್ನು ರಚಿಸಿ ಹಣಗಳಿಸಬಹುದಾಗಿದ್ದರೂ ಹಾಗೆ ಮಾಡಲಿಲ್ಲ. ಅಪರೂಪಕ್ಕೆ ಬೇಡಿಕೆಗಳನ್ನು ಒಪ್ಪಿ ಚಿತ್ರ ರಚಿಸಿದ್ದುಂಟು. ಕೆಲವೊಮ್ಮೆ ಸವಾಲಾಗಿ ಒಪ್ಪಿ ಕೆಲಸ ಕೈಗೊಂಡಿದ್ದಿದೆ. ಅಲ್ಲೂ ಪ್ರಯೋಗಶೀಲತೆ.

ಇದು ಭಿನ್ನ ಬಗೆಯ ಗೀಳು ಎಂದರೆ, ಕಲೆ, ಬದುಕು ಮತ್ತು ಸಮಾಜಗಳಿಗೆ ಸಂಬಂಧಿಸಿದಂತೆ. ಕಲಾವಿದ ತನ್ನ ಪಾಡಿಗೆ ತಾನು ಚಿತ್ರ ರಚಿಸಿ ಕುಳಿತರೆ ಅಥವಾ ಚೆನ್ನಾಗಿ ಮಾರಾಟವಾಗಿ ಹಣ, ಕೀರ್ತಿ ಬಂದರೆ ಆಗದು. ಕಲೆ ಮತ್ತು ಬದುಕಿಗೆ ನಿಕಟವಾದ ಸಂಬಂಧವಿದೆ. ಬದುಕು ಬದಲಾದಂತೆ ಕಲೆಯೂ ಬದಲಾಗಬೇಕು. ಆ ನಿಮಿಷದಲ್ಲಿ ಜನರಲ್ಲಿ ಸಮಾಜದಲ್ಲಿ ಜಾಗೃತಿ ಮೂಡಬೇಕು. ಆ ಗೀಳಿನಿಂದಾಗಿ ಅವರು ಆರ್ಟ್ ಟ್ರೈನಿಂಗ್ ಶಾಲೆ ಗಾಂಧೀಬಜಾರಿಗೆ ಬಂದ ನಂತರ ಪ್ರತಿ ವಾರ ಒಂದೊಂದು ದೊಡ್ಡ ವರ್ಣಚಿತ್ರವನ್ನು ಶಾಲೆ ಮುಂದೆ, ರಸ್ತೆಯಲ್ಲಿ ಓಡಾಡುವವರಿಗೆ ಕಾಣುವಂತೆ ಪ್ರದರ್ಶಿಸುತ್ತಿದ್ದರು. ಪ್ರತಿ ವಾರ ಹೊಸ ಚಿತ್ರಗಳು. ಜನರ ಕುತೂಹಲ ಕೆರಳಿ ಈ ವಾರ ಏನು ಹೊಸತು ಎಂದು ನಿರೀಕ್ಷಿಸುವಂತಹ ಪ್ರತಿಕ್ರಿಯೆ ಮೂಡಿತು. ಇದರಿಂದ ಉತ್ತೇಜಿತರಾಗಿ ವಿದ್ಯಾರ್ಥಿಗಳಿಂದ ಮಾತ್ರವಲ್ಲ ಕಲಾವಿದರನ್ನೂ ಆಹ್ವಾನಿಸತೊಡಗಿದರು. ಜಾಗೃತಿ ಮೂಡಿಸಲು ಬೇರೆ ಬೇರೆ ವಿಧಾನಗಳನ್ನು ಯೋಚಿಸಿದರು. ಕಲೆಯನ್ನು ನೋಡುವ ಮೆಚ್ಚುವ ಕಣ್ಣನ್ನು ರೂಢಿಸುವುದು ಒಂದು ಬಗೆ.

ಕಲೆಯ ಬಗ್ಗೆ ಚರ್ಚೆ. ಆಧುನಿಕ ಕಲೆ ಎಂದ ಕೂಡಲೆ ರೂಢಿಗಿಂತ, ಪರಿಚಿತವಾದದಕ್ಕಿಂತ ಭಿನ್ನವಾದದ್ದರಿಂದ ಅಲ್ಪ ಕಾಲದಲ್ಲಿ ಪರಿಭಾವಿಸುವುದು, ತಿಳಿಯುವುದು, ಅನುಭವಿಸಿ ಮೆಚ್ಚುವುದು ಕಷ್ಟ. ವಿಮರ್ಶಕರು ಅಭಿರುಚಿ ಬೆಳೆಸಬೇಕು. ನವ್ಯ ಕಾವ್ಯ ಬಂದಾಗ ಜನರಿಗೆ ಅದು ಅರ್ಥವಾಗಲಿಲ್ಲ, ಆಗ ಅಡಿಗರು, ಗೋಕಾಕರು ನವ್ಯ ಸಾಹಿತ್ಯದ ಬಗ್ಗೆ ತಾವೂ ಬರೆದರು, ಇತರರಿಂದಲೂ ಬರೆಸಿದರು. ನವ್ಯ ಕವಿಗಳ ಪರಂಪರೆ ಮಾತ್ರವಲ್ಲ ಹೊಸ ವಿಮರ್ಶಾ ಪರಂಪರೆಯನ್ನೂ ಹುಟ್ಟು ಹಾಕಿದರು. ಕಲೆಯ ಕ್ಷೇತ್ರದಲ್ಲೂ ಹಾಗಾಗಬೇಕೆಂದು ಹಡಪದ್ ಬಯಸಿದರು. ಎರಡು ಮೂರು ಪೀಳಿಗೆಯ ಹೊಸ ದೃಷ್ಟಿಯ ಕಲಾವಿದರನ್ನೇನೋ ತಯಾರು ಮಾಡಿದರು, ಆದರೆ ವಸ್ತು ನಿಷ್ಠ ಹಾಗೇ ಮುಕ್ತ ದೃಷ್ಟಿಯ ಕಲಾವಿದರನ್ನೇನೋ ತಯಾರು ಮಾಡುವಲ್ಲಿ ವಿಫಲರಾದರು. ಇಂದಿಗೂ ಅದು ಸಾಧ್ಯವಾಗಿಲ್ಲ, ಆದರೆ ವಿಶ್ಲೇಷಣೆ ಇಲ್ಲಿ ಅನಗತ್ಯ. ಕಲಾ ಅಧ್ಯಾಪಕರನ್ನು ರೂಪಿಸುವ ಶಾಲೆ ಇತ್ತು, ಅವರಲ್ಲಿ ಹೊಸ ದೃಷ್ಟಿ ಮೂಡಿಸಿದರು. ಆಗ ಬೆಂಗಳೂರಿನಲ್ಲಿ ಪರೀಕ್ಷಾ ಕೇಂದ್ರವಿರಲಿಲ್ಲ, ಧಾರವಾಡ, ಮದ್ರಾಸುಗಳಿಗೆ ಹೋಗಬೇಕಿತ್ತು, ಅದನ್ನು ಪ್ರಾರಂಭಿಸಿದರು. ಗುಲ್ಬರ್ಗಾದಲ್ಲೂ ಪರೀಕ್ಷಾ ಕೇಂದ್ರ ತೆರೆಯುವಂತೆ ಮಾಡಿದರು. ಇಲ್ಲಿ ಶಾಲೆಯಲ್ಲಿ ಪ್ರತ್ಯೇಕ ಚಿತ್ರಕಲಾ ವಿಭಾಗ ಪ್ರಾರಂಭಿಸಿದರು ಪಠ್ಯೇತರ ಚಟುವಟಿಕೆಗೂ ಅನುಕೂಲವಾಗುವಂತೆ. ಬಹುಶಃ ಆಗಿನ್ನೂ ಅವರ ಮನಸ್ಸಿನಲ್ಲಿ ತಮ್ಮದೇ ಖಾಸಗಿ ಶಾಲೆ ಪ್ರಾರಂಭಿಸುವ ಸುಳಿವು ಇದ್ದಿರಲಾರದು, 1963ರ ಆ ಕಾಲದಲ್ಲಿ.

ಕಲಾ ಪ್ರದರ್ಶನಗಳ ವ್ಯವಸ್ಥೆ ಕಲಾ ಜಾಗೃತಿ ಮೂಡಿಸುವಲ್ಲಿ ಬಹುಮುಖ್ಯ. ಐವತ್ತು ಅರವತ್ತರ ದಶಕಗಳಲ್ಲಿ ಮೈಸೂರು ದಸರಾ ವಸ್ತು ಪ್ರದರ್ಶನದ ಭಾಗವಾದ ಕಲಾ ಪ್ರದರ್ಶನವೇ ಮುಖ್ಯ ವೇದಿಕೆ. ಅಕಾಡೆಮಿಕ್ ಆದ, ವಾಸ್ತವವಾದೀ ಮಾದರಿಯ ಕೃತಿಗಳೇ ಹೆಚ್ಚಾಗಿದ್ದವು. ಸ್ಟಿಲ್ ಲೈಫ್, ನಿಸರ್ಗ ದೃಶ್ಯಗಳು, ಭಾವಚಿತ್ರಗಳು, ದಾಖಲೆ ಚಿತ್ರಗಳು, ವಾಣಿಜ್ಯ

ದೃಷ್ಟಿಯಿಂದ ಆಕರ್ಷಕವಾದ ರಚನೆಗಳು. ಇದಕ್ಕೆ ಅಪವಾದ ವೆಂಕಟಪ್ಪನವರ ನಿಸರ್ಗ ದೃಶ್ಯಗಳು, ಎಂ.ಎಸ್. ಚಂದ್ರಶೇಖರ್ ಅವರ ರಚನೆಗಳು. ವೆಂಕಟಪ್ಪನವರು ಆಗಾಗ್ಗೆ ತಮ್ಮ ಕೃತಿಗಳ ಪ್ರದರ್ಶನ ಇಡುತ್ತಿದ್ದರು. ಬೆಂಗಳೂರಿನ ಬ್ರಿಗ್ರೇಡ್ ರಸ್ತೆಯಲ್ಲಿ ಅವನೀಂದ್ರರ ಶಿಷ್ಯ ಮನೀಷಿ ಡೇ ಅವರ ಕಲಾ ಪ್ರದರ್ಶನ ವರ್ಷಕ್ಕೆ ಒಂದೆರಡು ಬಾರಿ ಇರುತ್ತಿತ್ತು. ಅಪರೂಪಕ್ಕೆ ಜಿ.ವೆಂಕಟಾಚಲಂ ವಿವಿಧ ಕಲಾವಿದರ ಕೃತಿಗಳ ಪ್ರದರ್ಶನ ಸಂಘಟಿಸುತ್ತಿದ್ದರು. ಚಿತ್ರಕಲಾ ಪರಿಷತ್ ಪ್ರಾರಂಭವಾದ ನಂತರ ಕಲಾ ಪ್ರದರ್ಶನ ವ್ಯವಸ್ಥೆಯೂ ತೊಡಗಿತು. ಮೈಸೂರು ದಸರಾ ಕಲಾಪ್ರದರ್ಶನದಲ್ಲಿ ಮಾತ್ರ ಹೊರಗಿನವರ ಚಿತ್ರಗಳನ್ನು ನೋಡುವ, ಹೊಸ ಪ್ರಯೋಗಗಳನ್ನು ಕಾಣುವ ಅವಕಾಶ ಸಿಗುತ್ತಿತ್ತು. ಆದರೆ ಅಪರೂಪಕ್ಕೆ ನಡೆಯುತ್ತಿದ್ದ ಈ ಪ್ರದರ್ಶನಗಳು ಕಲಾ ಜಾಗೃತಿ ಮೂಡಿಸುವಲ್ಲಿ ಸಫಲವಾಗಿರಲಿಲ್ಲ. ಜನರಿಗೆ ಷಾಕ್ ನೀಡುವ ರೀತಿಯ ಕಲಾ ಪ್ರದರ್ಶನಗಳ ಅಗತ್ಯವಿತ್ತು. ಮೆಚ್ಚಲಿ ಬಿಡಲಿ ಬದಲಾದ ದೃಷ್ಟಿಗಳ ಕಡೆ ಗಮನ ಸೆಳೆಯಬೇಕಿತ್ತು. ಹಡಪದರು ಆ ಬಗೆಯಲ್ಲಿ ಯೋಜನೆಗೆ ತೊಡಗಿದ್ದರು.

'We-4' ನಾವು ನಾಲ್ವರು ಪ್ರದರ್ಶನ ಹೊರಳು ದಾರಿಯ ಮಹತ್ವದ ಪ್ರದರ್ಶನ. ಬಿ.ವಿ.ಕೆ. ಶಾಸ್ತ್ರಿ, ಜಿ. ವೆಂಕಟಾಚಲಂ ನಾವು ನಾಲ್ವರನ್ನು ಸಂಘಟಿಸಿದ್ದು ಪಟೇಲ್ ಎಂದು ದಾಖಲಿಸಿದ್ದಾರೆ. ಠಾಕೂರ್ ಕೆ. ಪಟೇಲ್ ಮತ್ತು ಎಸ್.ಎಸ್. ಮುನೋಳಿ ವೀವರ್ಸ್ ಸರ್ವೀಸ್ ಸೆಂಟರಿನಲ್ಲಿದ್ದವರು. ಯಾವುದಾದರೂ ಎಕ್ಸಿಬಿಷನ್ ಮಾಡುವ ಸೂಚನೆಯನ್ನು ಪಟೇಲ್ ಹಡಪದರಿಗೆ ಹೇಳಿದ್ದು ವಾಸ್ತವ. ನಿಮ್ಮ ವಿದ್ಯಾರ್ಥಿಗಳಿದ್ದಾರೆ, ಸೇರಿ ಮಾಡೋಣ ಎಂದಾಗ, ಬರೋಡಾದಿಂದ ಬಂದಿದ್ದ ಮುನೋಳಿ, ಇಲ್ಲೇ ಇದ್ದ ಜಿ.ವೈ. ಹುಬ್ಳೀಕರ್ ಸೇರಿ ನಾಲ್ಕು ಜನರ ಕೃತಿಗಳನ್ನೇ ಪ್ರದರ್ಶಿಸಬಹುದೆಂದು ಹಡಪದ್ ಸೂಚಿಸಿದರು. 'We-4' ಹೆಸರು ಸೂಚಿಸಿದವರು ಜಿ. ವೆಂಕಟಾಚಲಂ. ಕೇವಲ ಪ್ರದರ್ಶನ ಹಡಪದರ ಉದ್ದೇಶವಾಗಿರಲಿಲ್ಲ, ಸಾಹಿತಿಗಳು, ಪತ್ರಕರ್ತರು, ವಿಮರ್ಶಕರು ಹೀಗೆ ನಾನಾ ರಂಗದವರೂ ಸೇರಿ ಚರ್ಚೆ ಆಗುವಂತಾಗಬೇಕು ಎಂಬ ಅವರ ಉದ್ದೇಶ 'ನಾವು ನಾಲ್ವರು' ಸಂಘಟನೆಯಿಂದಾಯಿತು. ಪ್ರಚಾರವಾಯಿತು. ಆದರೆ ವಿಶ್ಲೇಷಣೆ, ವಿಮರ್ಶೆ, ವಿಚಾರ ವಿನಿಮಯ ದೂರ ಉಳಿಯಿತು. ಸಮಾಜ ಇನ್ನೂ ಸಿದ್ಧವಾಗಿರಲಿಲ್ಲವೇ?

1964ರಲ್ಲಿ ಹಡಪದ್ 'ನಾವು ನಾಲ್ವರು' ಪ್ರದರ್ಶನದಲ್ಲಿ ಸಿಟಿಸ್ಕೇಪ್ಸ್ ಸರಣಿ ಚಿತ್ರಗಳನ್ನು ಸೇರಿಸಿದ್ದರು. ಮುಂದಿನ ವರ್ಷ ಪ್ರದರ್ಶನ ನಡೆಯಲಿಲ್ಲ. 1966ರಲ್ಲಿ ಎರಡನೆಯ ಪ್ರದರ್ಶನ 'ನಾವು ನಾಲ್ವರು' ಹೆಸರಿನಲ್ಲೇ ನಡೆಯಿತು. ಈ ಬಾರಿ ಹಡಪದ್ ಬ್ಲೋಟಾರ್ಚ್ ರಚನಾ ವಿಧಾನದ ಚಿತ್ರಗಳನ್ನು ಪ್ರದರ್ಶಿಸಿದರು. ಪ್ಲೈವುಡ್ ಮೇಲೆ ಅಲ್ಲಲ್ಲಿ ಕಲ್ಲು, ತಂತಿ ಇತ್ಯಾದಿ ವಸ್ತು ಇಟ್ಟು ಅದರ ಸುತ್ತ ಮರ ಸುಡುವುದು. ವಸ್ತು ಇದ್ದ ಕಡೆ ಮರ ಸುಡುತ್ತಿರಲಿಲ್ಲ. ಹೀಗೆ ಆಕಾರಗಳ ಸೃಷ್ಟಿ. ಅಮೂರ್ತ ಮತ್ತು ಆಕೃತಿ ಚಿತ್ರ ಬಗೆಗಳೆರಡೂ ಇದ್ದುವು. ಅದರಲ್ಲೇ ಬ್ಲಾಕ್ಸ್‌ಗಳ ಜೋಡಣೆ ಸಿಟಿ ಸ್ಕೇಪ್ಸ್‌ನಂತೆ, ಟವರ್‌ಗಳು. ಕೆಲವೊಮ್ಮೆ ಪೂರ್ಣ ಸುಟ್ಟು ರಂಧ್ರ ಮಾಡಿ

ಹಿಂಭಾಗದಲ್ಲಿ ಕೆಂಪು ಬಟ್ಟೆ ಅಂಟಿಸಿದ ಕೊಲಾಜ್‌ಗಳು. ಅದರ ಮೇಲೆ ಆಕೃತಿಗಳನ್ನು ಸುಟ್ಟು ಮೂಡಿಸುವುದು. ಆ ವಿಧಾನದಲ್ಲಿ 'ಚಂದ್ರಗ್ರಹಣ' ಎಂಬ ಬುಡಕಟ್ಟು ಜನಾಂಗದ ಹೆಣ್ಣಿನ ಚಿತ್ರ ತುಂಬ ಜನಪ್ರಿಯವಾಯಿತು. ಇನ್ನೊಂದು 'ಕಾರ್ತಿಕೇಯ', ಯೋಧರ ವೀರರ ನಾಯಕ. ರೇಖಾತ್ಮಕ ಅಭಿವ್ಯಕ್ತಿ ಕಲಾವಿದನಿಗೆ ಒಂದು ಸವಾಲೇ ಆಗುತ್ತದೆ. ಬ್ಲೋ ಟಾರ್ಚ್ ತಂತ್ರದಲ್ಲಿ ಜ್ಯಾಮಿತೀಯ ವಿನ್ಯಾಸಗಳನ್ನು ಮೂಡಿಸಿದವರಿದ್ದಾರೆ, ಆದರೆ ಹಡಪದರ ರೀತಿ ಮಾನವಾಕೃತಿಗಳನ್ನು ರಚಿಸಿದವರು ಇದೇ ಮೊದಲು ಎಂದು ಟ್ರೈಬಲ್ ಫ್ಯಾಮಿಲಿ ಕೃತಿ ಬಗ್ಗೆ ಮಾರ್ಥಾ ಹೇಳಿದ್ದಾರೆ. ಆ ಕೃತಿ ಅಲಂಕಾರಿಕ ವಿನ್ಯಾಸಗಳನ್ನೂ ಒಳಗೊಂಡಿದೆ.

1967ರಲ್ಲಿ ನಡೆದ ನಾವು ನಾಲ್ವರು ಪ್ರದರ್ಶನದಲ್ಲಿ ಹಡಪದರು ರೇಖಾಚಿತ್ರಗಳನ್ನು ಇಟ್ಟಿದ್ದರು. ಈ ಬಾರಿ ಈ ಪ್ರದರ್ಶನ 'We 4+' ಎಂದಾಯಿತು. ಇವರ ಜೊತೆಗೆ, ಅಂದರೆ ಮೂಲ ನಾಲ್ವರ ಜೊತೆಗೆ, ಪೀಟರ್ ಲೂಯಿಸ್, ಪತ್ತಾರ್ ಮೊದಲಾದ ಕಲಾವಿದರೂ ಸೇರಿಕೊಂಡರು. ಹಡಪದರ ಉದ್ದೇಶ ಕಲಾವಿದರಲ್ಲೂ ಜಾಗೃತಿ ಮೂಡಿಸುವುದು, ಜನರನ್ನು ತಲುಪಲು ಕಲಾ ಪ್ರದರ್ಶನ ಬಹು ಮುಖ್ಯ ಎಂಬ ಅರಿವುಮೂಡಿಸುವುದಾಗಿತ್ತು. ಕಲೆಯ ವಾತಾವರಣ ಮೂಡಿಸುವಲ್ಲಿ ಹಡಪದರಿಗೆ ನಾವು ನಾಲ್ವರು ಸಹ ಒಂದು ವೇದಿಕೆ, ಒಂದು ಸಂದರ್ಭ. ಇದೂ ಸಾಲದು ಎನಿಸಿದಾಗ ಅವರು ಯುವ ಕಲಾವಿದರನ್ನು ರೂಪಿಸಲು ಕಲಾ ಶಾಲೆಯನ್ನೇ ಪ್ರಾರಂಭಿಸಿದರು. ಮೂಲ ನಾಲ್ವರು ಕಲಾವಿದರಲ್ಲಿ ಹಡಪದರು ಮಾತ್ರವೇ ಹಲವು ಬಗೆಗಳಲ್ಲಿ ಇಂದಿನವರೆಗೂ ಕಲಾ ಜಾಗೃತಿ ಮೂಡಿಸುವ ಸಂಘಟನಾ ಕಾರ್ಯಗಳನ್ನು ಮುಂದುವರೆಸಿಕೊಂಡು ಬಂದದ್ದೇ ಅವರ ಪಾತ್ರದ ಮಹತ್ವವನ್ನು ಸ್ಥಾಪಿಸುತ್ತದೆ.

ಅರವತ್ತನಾಲ್ಕು ಅರವತ್ತೈದರ ಅವಧಿಯಲ್ಲೇ ರೇಖಾಚಿತ್ರ ಮತ್ತು ಆಕೃತಿ ಸಂಯೋಜನೆಗಳಲ್ಲಿ ಚಾಲುಕ್ಯ ಪ್ರಭಾವಿತ ಶೈಲಿಯಿಂದ ಬೇರೆಯಾದ ಪ್ರಯೋಗಕ್ಕೆ ತೊಡಗಿದರು. ಆ ವೇಳೆಗೆ ನಾಟಕದ ಪ್ರಸನ್ನ ಅವರ ಪರಿಚಯವಾಗಿ ಅವರಿಂದಲೂ ಉತ್ತೇಜನ ಬಂದಿತು. ಇದರಿಂದಾಗಿ ಆಕೃತಿಗಳನ್ನು ವಿರೂಪಗೊಳಿಸಿ ಚಿತ್ರಿಸಿದ್ದರು. ಅವರಿಗೆ ಆಕೃತಿಯ distortion ಪಿಕಾಸೊವಿನಿಂದ ಬಂದದ್ದಲ್ಲ. ಹಾಗೆ ನೋಡಿದರೆ ಆ ವಿಧಾನ ಭಾರತದ ಅಲಂಕಾರಿಕ ವಿನ್ಯಾಸಗಳಲ್ಲೂ ಆಕೃತಿಗಳಲ್ಲೂ ಕಂಡುಬರುತ್ತದೆ. ಪರಂಪರೆ ಮತ್ತು ಆಧುನಿಕತೆಗಳ ಬಗ್ಗೆ ಆಲೋಚಿಸುವ ಹಡಪದ್, ವಿಚಾರಧಾರೆಗಳು ನಮ್ಮಿಂದ ಎಷ್ಟು ಸಮೀಪ ಎಷ್ಟು ದೂರ ಎಂಬುದನ್ನು ಗಮನಿಸಿ, ಹೊಂದಿಕೊಳ್ಳುವವು, ಪರಿಣಾಮ ಸಾಧ್ಯತೆಗಳನ್ನು ಹೆಚ್ಚಿಸುವಂತಹವನ್ನು ಅಳವಡಿಸಿಕೊಂಡಿದ್ದಾರೆ. ಅವರ ಆಕೃತಿಗಳ ದೃಢ ದಿಟ್ಟತನಗಳು, ಬಳಸಿಕೊಳ್ಳುವ ಬಣ್ಣಗಳು ಪಾಶ್ಚಾತ್ಯ ಪ್ರಭಾವಕ್ಕಿಂತ ಬಾಲ್ಯದಲ್ಲಿ ಕಂಡ ನಿಸರ್ಗದ ಆಕಾರಗಳನ್ನೇ ಹೆಚ್ಚು ಹೋಲುತ್ತವೆ. ಪಿಕಾಸೊವಿನ ಆಲೋಚನಾ ವಿಧಾನದಿಂದ ಅವರು ಪ್ರೇರಣೆ ಪಡೆದಿದ್ದಾರೆ. ಎದುರು, ಪಾರ್ಶ್ವ ಮುಖಗಳ ಸಂಲಗ್ನ ವಿಧಾನ ಪಿಕಾಸೊ ಪ್ರಭಾವದ್ದೆನ್ನಬಹುದು. ಆದರೆ ಮೂಲ ಆಂಗಿಕ ಚಲನೆ, ಭಂಗಿಗಳು ಪರಂಪರೆಯ ಮೂಲದಿಂದ ಬಂದುವು. ವಿರೂಪದ ಪ್ರಯೋಗ ಮಾಡುವಲ್ಲೂ

ಇತರರಲ್ಲಿ ಕಾಣಬರದ ಸಂಯಮವನ್ನು ಸಾಧಿಸಿದ್ದಾರೆ. ಔಚಿತ್ಯವನ್ನು ಅವಲಂಬಿಸಿ ಬಂದದ್ದು ಈ ಸಂಯಮ. ಪಾಶ್ಚಾತ್ಯರ ಆಧುನಿಕ ಕಲೆಯನ್ನು ದೇಶೀಯಗೊಳಿಸುವುದು ಹಡಪದರ ಗುರಿ ಎನ್ನುತ್ತಾರೆ ಮಾರ್ಥಾ. ಆದರೆ ಮೂಲ ಸೆಲೆ, ನೆಲೆ ಭಾರತೀಯವೇ. ಈ ಅವಧಿಯಲ್ಲೇ ಸಿಟಿ ಆಫ್ ಲವ್ ಚಿತ್ರಗಳು ರಚನೆಯಾದುವು. ಗ್ರಾಮ ದೇವತೆ ಪ್ರತ್ಯಕ್ಷವಾಗುವ 'ಬರ' ಚಿತ್ರದಲ್ಲೂ ನಂಬಿಕೆಗಳ ಮೂಲವನ್ನು ತಂದಿದ್ದಾರೆ.

ನಾವು ನಾಲ್ವರು ಪ್ರದರ್ಶನ ನೋಡಿ ಮೆಚ್ಚಿದ್ದ ಅಮೆರಿಕಾದ ಪ್ರಾಧ್ಯಾಪಕರು ಬಂದು ಕೇಳಿದಾಗ ಅವರಿಗಾಗಿ ಹಲವು ಚಿತ್ರ ರಚಿಸಿಕೊಟ್ಟರು. ಟೆಕ್ಸಾಸ್ ವಿಶ್ವವಿದ್ಯಾಲಯದ East and West ಮ್ಯಾಗ್‌ಜಿನ್‌ನ ಎರಡೂ ಕಡೆಯ ಕವರ್‌ಗೆ ಒಂದು ಚಿತ್ರ ಬಳಸಿಕೊಂಡರು. ಮುಂದೆ ಅವರಿಗಾಗಿ ಒಂದು ತಿಂಗಳಲ್ಲಿ ನೂರಿಪ್ಪತ್ತು ಚಿತ್ರ ರಚಿಸಿದರು. ಅವುಗಳಲ್ಲಿ ಕಲಾ ವಿಮರ್ಶಕಿಯಾದ ಪ್ರಾಧ್ಯಾಪಕರ ಪತ್ನಿ ಎಂಬತ್ತು ಕೃತಿಗಳನ್ನು ಆರಿಸಿ ಒಯ್ದರು. ಟೆಕ್ಸಾಸ್‌ನಲ್ಲಿ ಅವುಗಳ ಪ್ರದರ್ಶನ ನಡೆಯಿತು. ಈ ಅವಧಿಯಲ್ಲಿ ಇವರ ಕಲಾ ಕೃತಿಗಳ ಪ್ರದರ್ಶನವನ್ನು ಹೆಚ್ಚಾಗಿ ಏರ್ಪಡಿಸಿದವರು ಮಾಕ್ಸ್‌ಮುಲರ್ ಭವನದ ನಿರ್ದೇಶಕರಾಗಿದ್ದ ಥಾಪಾ ಅವರು.

ನಾವು ನಾಲ್ವರು ಪ್ರದರ್ಶನಗಳಿಂದ ಹೊಸ, ಆಧುನಿಕ ದೃಷ್ಟಿ ಬೆಳೆಯಲು ಸಾಧ್ಯವಾಯಿತು. ಮಾತ್ರವಲ್ಲ, ತರುಣ ಕಲಾವಿದರು ಆಕರ್ಷಿತರಾಗಿ, ಮುಕ್ತ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಕಂಡುಕೊಳ್ಳುವಂತಾಯಿತು.

# 4

To teach a subject is one of the best ways of learning it.

- Edward Sackville-West

## ಜ್ಞಾನ ಕುಲ

1967ರಲ್ಲಿ ಮಿಣಜಿಗಿಯವರ ಅಧ್ಯಾಪಕರ ಕಲಾ ತರಬೇತಿ ಶಾಲೆಯನ್ನು ಬೆಂಗಳೂರಲ್ಲಿ ಮುಚ್ಚಲಾಯಿತು. ಹಡಪದರ ಮುಂದೆ ಭವಿಷ್ಯದ ಕವಲು ದಾರಿಗಳು. ಮುಂಬೈಯಲ್ಲಿ ಕಲೆಯ ವಾತಾವರಣವಿತ್ತು. ವಾಣಿಜ್ಯ ದೃಷ್ಟಿಯಿಂದಲೂ ಆಕರ್ಷಣೆಯಿತ್ತು. ಇಲ್ಲಿ ಏಳು ವರ್ಷಗಳಿಂದ ಮಾಡಿದ ಕಾರ್ಯವನ್ನು ಫಲಕಾರಿಯಾಗುವ ಮುನ್ನ ಕೈ ಬಿಡಬೇಕೇ ಎಂಬ ವಿಷಾದ. ಹಡಪದರ ಕಲೆಯ ಗೀಳು ಅವರನ್ನು ಕಲಾ ಶಾಲೆ ತೆಗೆಯುವ ಹೊಸ ಸಾಹಸಕ್ಕೆ ನೂಕಿತು. ಗುರು ದಂಡಾವತಿಮಠ ಅವರು ಆ ಸಾಹಸ ಕಷ್ಟದ್ದು ಎಂದು ಎಚ್ಚರಿಕೆ ನೀಡಿದ್ದರು. ಒಮ್ಮೆ ಪ್ರವೇಶಿಸಿದರೆ ಹೊರಬರುವಂತಿಲ್ಲ. ಸೃಜನಶೀಲ ಕಾರ್ಯಕ್ಕೂ ಅಡ್ಡಿಯಾಗಬಹುದು. ಆದರೆ ಈ ವೇಳೆಗೆ ಅವರು ಗಳಿಸಿದ್ದ ಹಲವು ಶಿಷ್ಯರ ಉತ್ತೇಜನದಿಂದ 1968ರಲ್ಲಿ Ken School of Art ಅನ್ನು ಪ್ರಾರಂಭಿಸಿದರು. ಕೆನ್ ಎಂದರೆ ಜ್ಞಾನ. ಹಡಪದರ ಆದರ್ಶಗಳ ಬಿಂಬ. ಪ್ರಾಚೀನ ಗುರುಕುಲ ಪದ್ಧತಿಯ ವೈಯುಕ್ತಿಕ, ಆತ್ಮೀಯ ಗುರು-ಶಿಷ್ಯ ಸಂಬಂಧದಂತೆ ಶಾಲೆಯ ಸ್ವರೂಪ. ಅವರ ಶಿಕ್ಷಣ ವಿಧಾನವೂ ಇತರ ಶಾಲೆಗಳಿಗಿಂತ ಭಿನ್ನವಾಗಿತ್ತು. ಭಾರತೀಯ ಕಲಾ ಪದ್ಧತಿಯಲ್ಲಿನ ಕಲಿಕೆಯ ಪದ್ಧತಿಗಿಂತಲೂ ಬೇರೆಯಾಗಿತ್ತು. ಭಾರತೀಯ ಪದ್ಧತಿಯಲ್ಲಿ, ಏಕೆ ಒಂದು ಕಾಲಕ್ಕೆ ಪಾಶ್ಚಾತ್ಯರಲ್ಲೂ ಸಹ, ಗುರು ತನ್ನ ವಿಧಾನ, ಪದ್ಧತಿ, ಶೈಲಿಯನ್ನೇ ಶಿಷ್ಯರಿಗೆ ಕಲಿಸುವುದು. ಇಂದಿಗೂ ಭಾರತೀಯ ಶಾಸ್ತ್ರೀಯ ಸಂಗೀತ ಪದ್ಧತಿಯಲ್ಲಿ, ಮುಖ್ಯವಾಗಿ ಘರಣಾ ಪದ್ಧತಿಯಲ್ಲಿ, ಅದು ಉಳಿದು ಬಂದಿದೆ. ಪದ್ಧತಿಯಿಂದಲೇ, ತಂತ್ರವಿಧಾನಗಳಿಂದಲೇ

ಕಲಾವಿದರ ಮೂಲ ಗುರುತಿಸಿ ಶೈಲಿಯನ್ನು ಹೆಸರಿಸುವುದು. ಅಲ್ಲಿ ಪರಂಪರೆ ಮುಂದುವರೆಸುವುದೇ ಮುಖ್ಯವಾಗುತ್ತದೆ. ಸಮಕಾಲೀನ ಶಾಲೆಗಳಲ್ಲಿ ರೂಢಿಯಾಗಿದ್ದುದು ಪರೀಕ್ಷಾ ದೃಷ್ಟಿಯ ಅಕಾಡೆಮಿಕ್ ಪದ್ಧತಿ. ಹಡಪದ್ ಅವರದು ಇವರೆಡಕ್ಕಿಂತ ಭಿನ್ನ. ತರುಣರಿಂದ ತೊಡಗಿ ನಿವೃತ್ತಿ ವಯಸ್ಸಿನವರೆಗಿನ ವಿದ್ಯಾರ್ಥಿಗಳು (ಅಧ್ಯಪಾಕರು) ತರಬೇತಿ ಶಾಲೆಗೆ ಬರುತ್ತಿದ್ದುದರಿಂದ ಅಲ್ಲಿ ಅವರಿಗೆ ಬೇರೆ ವಿಧಾನದಿಂದಲೇ ಕಲಿಸಿದ ಅನುಭವವಿತ್ತು. ಕೆನ್ ಕಲಾ ಶಾಲೆಯಲ್ಲೂ ಅದನ್ನೇ ಮುಂದುವರೆಸಿದರು. ವಿದ್ಯಾರ್ಥಿಗಳ ಹಿನ್ನೆಲೆ, ಆಸಕ್ತಿ ದೌರ್ಬಲ್ಯ, ಶಕ್ತಿಗಳನ್ನರಿತು ಒಳಗಿನ ಸತ್ವ ಪ್ರಕಾಶಗೊಳ್ಳುವ ಬಗೆಗೆ ಒತ್ತು ನೀಡುವ ವಿಧಾನ. ಶಿಷ್ಯರ ಮನೋನಾಡಿ ಮಿಡಿಸಿ ಕಲಿಸುವ ವಿಧಾನ ಹಡಪರದು. ಬಹುಶಃ ಕಳೆದ ಮೂವತ್ತು ವರ್ಷಗಳಲ್ಲಿ ಕೆನ್ ಕಲಾಶಾಲೆಯಲ್ಲಿ ಕಲಿತ ವಿದ್ಯಾರ್ಥಿಗಳು ಆತ್ಮವಿಶ್ವಾಸದಿಂದ ತಮ್ಮದೇ ಸ್ವಂತಿಕೆ ಕಂಡುಕೊಂಡು ಬೆಳೆದು ರಾಷ್ಟ್ರಾದ್ಯಂತ ಕೀರ್ತಿ ಪಡೆದಿರುವಂತೆ ಮತ್ತೊಂದು ಖಾಸಗಿ ಶಾಲೆಯಿಂದ ಆಗಿರಲಾರದು. ಅವರ ಶಿಷ್ಯರಲ್ಲಿ ವಿಶ್ವವಿದ್ಯಾಲಯಗಳಲ್ಲಿ, ವಿದೇಶಗಳಲ್ಲಿ ಉನ್ನತ ಶಿಕ್ಷಣ ಮಾನ್ಯತೆ ಗಳಿಸಿದವರು ಬಹಳಷ್ಟು ಇದ್ದಾರೆ.

ಆದರೂ ಕೆಲವು ಕಲಾವಿಮರ್ಶಕರಿಗೆ ಕೆನ್ ಕಲಾಶಾಲೆ ಅವ್ಯವಸ್ಥೆಯ ಆಗರದಂತೆ ಕಂಡಿದೆ. ಇಲ್ಲಿನ ಅನೌಪಚಾರಿಕ ವಾತಾವರಣ, ಮುಕ್ತ ದೃಷ್ಟಿ, ಜೊತೆಗೆ ಹಡಪದ್ ಅವರಿಗೆ ಕಲಿಸುವ, ಮತ್ತೆ ತಾವೇ ಮಾಡುವ ಕಲಾ ಪ್ರಯೋಗಗಳ ಹೊರತು ಉಳಿದ ಪ್ರಾಪಂಚಿಕ ವ್ಯಾವಹಾರಿಕ ದೃಷ್ಟಿಯ ಬಗೆಗೆ ಆಸಕ್ತಿ ಇಲ್ಲದುದೂ ಇಂಥ ಭಾವನೆ ಮೂಡಲು ಕಾರಣವಾಗಿದೆ. ಅವರಿಗೆ ತಮ್ಮ ಕಾರ್ಯದ ಭರದಲ್ಲಿ ಶಾಲೆಗೆ ಒಂದು ಖಾಯಂ ಕಟ್ಟಡ ಅಗತ್ಯ ಎಂದೂ ಅನಿಸಲಿಲ್ಲ. ಒಂದು ದೃಷ್ಟಿಯಲ್ಲಿ, ಅವ್ಯವಸ್ಥೆಯಲ್ಲೂ ವ್ಯವಸ್ಥೆಯಿದೆ ಎಂಬ ಹೇಳಿಕೆ ನೆನಪಾಗುತ್ತದೆ. ಅಂತರಂಗದ ಸಹಜ ತತ್ವವೇ ಇಲ್ಲಿಯ ಮೌಲ್ಯ. ಅದರ ಅರಳುವಿಕೆಯೇ ಇಲ್ಲಿಯ ಫಲ.

ಶಾಲೆ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವೂ ಆಯಿತು. ವಿಖ್ಯಾತ ಕಲಾವಿದರ ಜನ್ಮದಿನ ಆಚರಣೆಯ ನೆಪದಲ್ಲಿ ಅವರ ಕೃತಿಗಳ ಅಧ್ಯಯನ, ಚರ್ಚೆ, ಮತ್ತು ವಿದ್ಯಾರ್ಥಿಗಳಿಂದಲೇ ಪ್ರತಿಕೃತಿಗಳನ್ನು ಮಾಡಿಸಿ ಕಲಾ ಪ್ರದರ್ಶನಗಳ ವ್ಯವಸ್ಥೆ ಮಾಡುವ ಪದ್ಧತಿಯೂ ರೂಢಿಯಾಯಿತು. ಇದು ಹಡಪದ್‌ರ ಹೊಸ ಯೋಜನೆ. ಅಮೃತಾ ಶೇರ್‌ಗಿಲ್, ಅನಂತರ ಕೆ.ಕೆ.ಹೆಬ್ಬಾರ್, ಪಿಕಾಸೊ ಮುಂತಾಗಿ. 69–70ರಲ್ಲಿ ಹೆಬ್ಬಾರ್ ಪ್ರತಿಕೃತಿಗಳ ಪ್ರದರ್ಶನಕ್ಕೆ ಅವರೇ ಬಂದಿದ್ದರು. ಶಿವರಾಮ ಕಾರಂತರೂ ಬಂದಿದ್ದರು. ತಮ್ಮ ಕೃತಿಗಳ ಸತ್ವವನ್ನು ಸೆರೆಹಿಡಿದ ವಿದ್ಯಾರ್ಥಿಗಳ ಸಾಹಸಕ್ಕೆ ಹೆಬ್ಬಾರರ ಮೆಚ್ಚುಗೆ.

ಗುರು ದಂಡಾವತಿ ಮಠರ ಮಾತು ಅನುಭವದ್ದಾಗಿತ್ತು. ಶಾಲೆ ನೋಡಲು ಪ್ರಾರಂಭವಾದದ್ದು ಕುರುಬರ ಸಂಘದ ಬಳಿ, ಗಾಂಧಿನಗರದಲ್ಲಿ. ಎರಡು ವರ್ಷದ ನಂತರ ಕಪಾಲಿ ಟಾಕೀಸಿನ ಬಳಿಗೆ ವರ್ಗ. ಒಂದೇ ವರ್ಷದಲ್ಲಿ ಸರ್ಪೆಂಟೈನ್ ರಸ್ತೆ, ಕುಮಾರ ಪಾರ್ಕ್‌ಗೆ ಬದಲಾವಣೆ. 1972ಕ್ಕೆ ಶೇಷಾದ್ರಿ ಪುರಂಗೆ ಬಂದದ್ದು. ಇಪ್ಪತ್ತೈದು ವರ್ಷಗಳಿಂದ ಇಲ್ಲೇ ಶಾಲೆ

ನಡೆಯುತ್ತಿದೆ, ವಿಸ್ತಾರವಾಗಿ ಗ್ರಾಫಿಕ್ ಮೊದಲಾದ ವಿಭಾಗಗಳನ್ನು ಹೊಂದಿ.

ಹಡಪದ್ ತಮ್ಮ ಕಲಾ ರಚನೆಗಳಿಗೆ ಹೊಸ ಸಾಮಗ್ರಿ, ಮಾಧ್ಯಮಗಳನ್ನು ಹುಡುಕುತ್ತಾ ಇರುತ್ತಾರೆ. ಇಂದಿಗೂ ಆ ಪ್ರವೃತ್ತಿ ಹೋಗಿಲ್ಲ. ಇತ್ತೀಚಿನ ಕೃತಿಗಳ ಆಯಿಲ್ ಬೌಂಡ್ ಡಿಸ್ಟೆಂಪರ್ ಬಳಸಿ ಪ್ರಯೋಗಿಸಿದ್ದಾರೆ. 1972ರಲ್ಲಿ ಸ್ಟೆನ್ಸಿಲ್ ಕಾಗದದ ಮೇಲೆ ರೇಖಾ ಚಿತ್ರಗಳನ್ನು ರಚಿಸಿ, ಪ್ರತಿಗಳನ್ನು ತೆಗೆದು, ಪುಸ್ತಕಗಳಾಗಿ ಹೊಲಿದು, ಪ್ರಯೋಗ ಮಾಡಿದರು. ಕಾಮ ಆ ರಚನೆಗಳ ವಸ್ತು. ಕಾಮದಲ್ಲಿಯೇ ಗಂಡು ಹೆಣ್ಣಿನ ಸಂಬಂಧಗಳ ವೈವಿಧ್ಯ; ಟೀಕೆ, ವಿಮರ್ಶೆ, ವ್ಯಂಗ್ಯವೂ ಅಲ್ಲಿವೆ. ಅಲಂಕಾರಿಕ ಶೈಲಿ. ಸಾಂಕೇತಿಕವಾಗಿ ರೂಪಿಕೆಯ ಅಂಶಗಳೂ ಸೇರಿವೆ. ಒಂದು ರಚನೆಯಲ್ಲಿ, ಅತಿಕಾಮಿಗೆ ಪ್ರಪಂಚವೆಲ್ಲಾ ಸ್ತ್ರೀಮಯ. ಅವನ ಕನ್ನಡಕದ ತುಂಬ ಹೆಣ್ಣಿನ ಆಕೃತಿಗಳೇ ಇವೆ. ಮಾತನಾಡುತ್ತಿರುವ ಗಂಡಿನ ತುಟಿಗಳೇ ಆಕೃತಿಗಳ ಚುಂಬನದ ರೂಪ ಹೊಂದಿವೆ, ಇನ್ನೊಂದರಲ್ಲಿ, ಕಾಮಿಗಳ ಜಗಳ. ಎಂಥ ಕ್ರೌರ್ಯ. ಬೆನ್ನುಗಳಿಗೆ ಅಂಟಿ ವಿರುದ್ಧ ಮುಖ ಮಾಡಿದ ಗಂಡು ಹೆಣ್ಣುಗಳು. ಈ ರಚನೆಗಳಲ್ಲಿ ರೇಖೆಗಳೇ ಅಲಂಕಾರಿಕವಾಗುತ್ತವೆ, ಬೇರೆ ವಿನ್ಯಾಸಗಳ ಅಗತ್ಯವಿಲ್ಲ. ಎರಡು ಸ್ತ್ರೀ ಸರಣಿ ಚಿತ್ರಗಳಿವೆ. ನಗ್ನ ಸ್ತ್ರೀಗಳದು. ಒಂದನೆಯ ಸರಣಿ ವಿನ್ಯಾಸ ಆಧಾರಿತವಾದದ್ದು. ಎರಡನೆಯದರಲ್ಲಿ ವಿವಿಧ ಬಣ್ಣದ ಕಾಗದ ಬಳಸಲಾಗಿದೆ. ರೇಖೆ, ಬಣ್ಣ ಮಿಳಿತವಾಗಿದೆ. ಇದರಲ್ಲಿ ರೂಪದ ಸೌಂದರ್ಯಕ್ಕೆ ಒತ್ತು ನೀಡಲಾಗಿದೆ. ದೇಹದ ಬಾಗು ಬಳುಕು, ಸ್ಥೂಲ-ತೆಳು, ಮೃದು-ಬಿರುಸುಗಳ ಅನುಭವ. ಒಂದು ಅಭಿರಚನೆಯಲ್ಲಿ patternನಲ್ಲಿ ಇನ್ನೊಂದು ಅಭಿರಚನೆ ಇಟ್ಟಾಗ ಒಂದಕ್ಕೊಂಡು ಪೂರಕವಾಗಿ ಪ್ರಕ್ಷೇಪಗೊಂಡು ಲಯ ಸೃಷ್ಟಿಯಾಗುತ್ತೆ. ಅದರಿಂದ ಸೌಂದರ್ಯಾನುಭವ. ಕಾಗದದ ಬಣ್ಣ, ಚಿತ್ರದ ಬಣ್ಣದ ಪರಸ್ಪರ ಸಂಬಂಧಗಳು, ಮೂಡಿಸುವ ಭಾವಗಳು. ಈ ರಚನೆಗಳಲ್ಲಿ ಮಾತೀಸನ ಪ್ರಭಾವ ಕಾಣಬಹುದು. 1974ರಲ್ಲಿ ಬಡವರ ಮನೆಗಳ ವರ್ಣಚಿತ್ರ ರಚನೆ. ನಾಲ್ಕು ಜನ ಕುಳಿತು ಬಾಳೆಹಣ್ಣು ತಿನ್ನುವ ತೈಲಚಿತ್ರ ಅಮೃತ ಶೇರ್‌ಗಿಲ್‌ಳ ''ಫ್ರೂಟ್‌ಸೆಲರ್ಸ್'' ಅನ್ನು ನೆನಪಿಸುತ್ತದೆ. ಮತ್ತೊಂದು ದೊಡ್ಡ ತೈಲಚಿತ್ರ ಸಮುದ್ರ ಮತ್ತು ಸ್ತ್ರೀ. ಭೂಮಿ ಮತ್ತು ತೆರೆಗಳ ಸಂವೇದನೆ. ಶಿಲಾಯುಗದಿಂದ ಸೈಕಲ್ ಯುಗದವರೆಗೂ ಸ್ತ್ರೀ ಬಗ್ಗೆ ಬದಲಾಗದ ದೃಷ್ಟಿಯ ದೊಡ್ಡ ತೈಲಚಿತ್ರ. ಲಾರಿ ಡ್ರೈವರ್‌ಗಳ ಕೆಲವು ಚಿತ್ರಗಳಿವೆ. ಎಲ್ಲರ ಗಮನ ಸೆಳೆದ ಆಗಿನ ಒಂದು ತೈಲ ಚಿತ್ರ 'ಬ್ಲೂರೋಸ್' ಓಲ್ಡ್ ಮಾಸ್ಟರ್ಸ್ ತಂತ್ರದಲ್ಲಿ ಮಾಡಿದ ಪ್ರಯೋಗ. ಸಾಂಕೇತಿಕತೆ, ವಿವರಪೂರ್ಣ ನಯಗಾರಿಕೆ, ಅಭಿವ್ಯಕ್ತಿವಾದೀ ರೂಪಿಕೆಗಳ ಸಮೀಕರಣ ಅಲ್ಲಿದೆ. ಹೆಣ್ಣಿನ ಕೋಮಲತೆ ಗಂಡಿನ ಕಾಮುಕ ಮೃಗೀಯತೆಗಳು ಮೂಡಿ ಬಂದಿವೆ.

ಮೈವಳಿಕೆ ದೃಷ್ಟಿಯಿಂದ ನಡೆಸಿದ ಪ್ರಯೋಗಗಳು. ರೂಪ, ಮೈವಳಿಕೆಗಳನ್ನು ಮೂಡಿಸಲು ಮರಳು, ಪ್ಲಾಸ್ಟರ್ ಆಫ್ ಪ್ಯಾರಿಸ್, ಕೆಂಪು ಬಣ್ಣದಲ್ಲಿ ಅದ್ದಿದ ಬೆಂಕಿ ಕಡ್ಡಿಗಳು, ಕಪ್ಪು ಹಿನ್ನೆಲೆ ಬಳಸಿ ರಚಿಸಿದ ಚಿತ್ರ. ಬಣ್ಣ ಬಳಸಿರೋದು ಕಡಿಮೆ. ಚಿತ್ರ ನಿಗೂಢ ಭಯ ಮೂಡಿಸುವಂಥದು. ಒಂದು ಚಿತ್ರ ಕೇಂದ್ರ ಲಲಿತ ಕಲಾ ಅಕಾಡೆಮಿಯಲ್ಲಿದೆ. ಇದಲ್ಲದೆ

ರೆಕ್ಕೆಯುಳ್ಳ ದೇವತೆಗಳ ಚಿತ್ರ. ಬಿಳಿ ಕಪ್ಪು ದೇವತೆಗಳು ಸಾತ್ವಿಕತೆ, ತಾಮಸಿಕತೆ ಅಥವಾ ಎವಿಲ್‌ನ ಸಂಕೇತವಾಗುತ್ತವೆ. ವುಮನ್ ಫೀಡಿಂಗ್ ಬರ್ಡ್ಸ್ ಒಂದು ಚಿತ್ರಸರಣಿ. ಹೆಣ್ಣು ಮತ್ತು ವಿಶ್ವದ ಸಂಬಂಧಗಳ ಅರಸುವಿಕೆ. ನಿಸರ್ಗದ ಆ ಹೆಣ್ಣೂ ಹಕ್ಕಿ ಆಗುತ್ತಾಳೆ.

ಸರಣಿ ಚಿತ್ರಗಳ ಬಗ್ಗೆ ಒಂದು ಸ್ಪಷ್ಟನೆ ಅಗತ್ಯ. ಒಂದು ಕೃತಿಯನ್ನು ಜನ ಮೆಚ್ಚಿದಾಗ ಅಂಥವನ್ನೇ ರಚಿಸುವುದು ಒಂದು ಬಗೆ. ಅಲ್ಲಿ ವಾಣಿಜ್ಯ ದೃಷ್ಟಿಯೂ ಇರಬಹುದು. ಆದರೆ ಹಡಪದರು ಒಂದು ವಿಚಾರ, ಒಂದು ಚಿಂತನೆಯನ್ನು ಹೇಳಲು ಅದರ ಸೂಕ್ಷ್ಮಗಳನ್ನು ಮಗ್ಗಲುಗಳನ್ನು ಸಂಬಂಧಗಳನ್ನು ವ್ಯಕ್ತಪಡಿಸಲು ಹತ್ತಾರು ಚಿತ್ರಗಳನ್ನು ರಚಿಸುತ್ತಾರೆ. ಆಗ ಒಂದು ರಸಣಿ ಸಮಗ್ರ ಅನುಭವವನ್ನು ಕೊಡುತ್ತದೆ.

ಶಾಲೆಯ ಮೂಲಕ ಹಲವು ಬಗೆಯ ಸಾಂಸ್ಕೃತಿಕ ಎಚ್ಚರ ಮೂಡಿಸುವ ಕಾರ್ಯವನ್ನೂ ಹಡಪದ್ ಮಾಡಿದರು. ಸಾಹಿತ್ಯ, ರಂಗಭೂಮಿ, ಸಂಗೀತ ಮುಂತಾದ ಕ್ಷೇತ್ರಗಳ ತಜ್ಞರ ಉಪನ್ಯಾಸ, ವಿಚಾರ ವಿನಿಮಯಗಳು ಜ್ಞಾನ ಹಾಗೂ ಅಭಿವ್ಯಕ್ತಿಯ ವಿಸ್ತಾರಕ್ಕೆ ಅವಕಾಶ ಮಾಡಿಕೊಡುವಂಥವು. ವಿದ್ಯಾರ್ಥಿಗಳಿಂದ ಲೇಖನ ಬರೆಸುವುದು, ಅನುವಾದ ಮಾಡಿಸುವುದು, ವಿಮರ್ಶೆಯ ಪ್ರಕಟಣೆ. ಇದಕ್ಕಾಗಿ ಕೆಲವು ವರ್ಷ 'ಕಲಾವಿಕಾಸ' ಪತ್ರಿಕೆ ನಡೆಸಿದರು. ವಿದ್ಯಾರ್ಥಿಗಳ ಕಲಾ ಪ್ರವಾಸ, ನಿಸರ್ಗದೃಶ್ಯಗಳ ರಚನೆ, ಅವುಗಳ ಪ್ರದರ್ಶನ ಈ ಶಾಲೆಗೇ ವಿಶೇಷವಾದುದೇನಿಲ್ಲ. ತಾವಐಲೂ ಭಾಗಿಯಾಗಿ ಆ ನೆಪದಲ್ಲಿ ನಡೆಸುವ ಪ್ರಾತ್ಯಕ್ಷತೆಗಳಿಂದ ತಂತ್ರ ಪ್ರಜ್ಞೆ ಮೂಡಿಸುವುದು ಅವರ ವಿಶೇಷ ರೀತಿ. ಶಾಲೆಯಲ್ಲೂ ಹೊರಗೂ ಅದೇ ಒಂದು ಶಿಕ್ಷಣ. ಆ ಬಗ್ಗೆ ವಿಮರ್ಶಕರಿಂದ ಭಿನ್ನ ಅಭಿಪ್ರಾಯಗಳು. ಅವರ ಬಹು ರಚನೆಗಳು demonstrationಗಾಗಿ, ಅದರಂತೆ ಇರುವುವು ಎಂದು ಒಂದಾದರೆ, ಅವರ ಈ ಬಗೆಯ ಕೃತಿಗಳು ವೈಯುಕ್ತಿಕ ರಚನೆಗಳಿಗಿಂತ ಶಕ್ತಿಯುತವಾಗಿವೆ, ಗಂಭೀರವಾಗಿವೆ ಎಂಬುದು ಮತ್ತೊಂದು ಅಭಿಪ್ರಾಯ. ವಾಸ್ತವ ಸಂಗತಿಯೆಂದರೆ ವಿದ್ಯಾರ್ಥಿಗಳಿಗೆ ಎಷ್ಟು ಬೇಕೋ ಅಷ್ಟು ತಿಳಿಸುವಾಗ ರಚನೆಗಳು ಅಲ್ಲೇ ನಿಲ್ಲುತ್ತವೆ, ಅಪೂರ್ಣವಾಗೇ ಉಳಿಯುತ್ತವೆ. ವೈವಿಧ್ಯ, ಮಾಧ್ಯಮ, ಪ್ರಯೋಗಗಳಿಗೆ ಸಂಬಂಧಿಸಿ. ಆದರೆ ಹಲವು ವೇಳೆ ಅಭಿವ್ಯಕ್ತಿಯಲ್ಲಿ ಈ ಮಟ್ಟಕ್ಕೆ ಇದು ಪೂರ್ಣ ಎನಿಸಿದಾಗಲೂ ವಿವರಗಳಿಗೆ ಹೋಗದೆ ನಿಲ್ಲಿಸುತ್ತಾರೆ. ಅದು ಗಂಭೀರ ಚಿಂತನೆಯಿಂದ ಮೂಡಿದ್ದೇ ಆಗಿರುತ್ತದೆ.

ಎಪ್ಪತ್ತರ ದಶಕ, ತುರ್ತುಪರಿಸ್ಥಿತಿ ಕಾಲದಲ್ಲಿ 'ಸಮುದಾಯ' ರೂಪುಗೊಂಡಿತು. ಹಡಪದರಿಗೆ ಪ್ರಸನ್ನರ ಪರಿಚಯ ಹಿಂದಿನಿಂದಲೇ ಇದ್ದಿತು. ಎಡಪಂಥೀಯ ವಿಚಾರ ಧಾರೆಗಳು ಒಂದು ಕಡೆ, ರಂಗಭೂಮಿ ಮತ್ತು ಚಿತ್ರಕಲೆಗಳ ಸಂಬಂಧದ ಆಸಕ್ತಿ ಮತ್ತೊಂದು ಕಡೆ. ಹಡಪದರು ಸ್ವತಃ ತಾವೂ ಸಮುದಾಯದ ಚಟುವಟಿಕೆಗಳಲ್ಲಿ ತೊಡಗಿದ್ದಲ್ಲದೆ ವಿದ್ಯಾರ್ಥಿಗಳನ್ನೂ ತೊಡಗಿಸಿದರು. ಕ್ಯೂಬಾದ ಪೋಸ್ಟರ್‌ಗಳ ಪ್ರದರ್ಶನ, ಚರ್ಚೆ. ಭಿತ್ತಿಪತ್ರಗಳನ್ನು ರಚಿಸುವುದು. ನಾಟಕಗಳಿಗೆ ಕಲಾನಿರ್ದೇಶನದ ಬಗ್ಗೆ ಚರ್ಚೆ. ಹಳ್ಳಿಗಳಿಗೆ

ನಾಟಕ ಒಯ್ದಾಗ ಸ್ಥಳೀಯವಾಗಿ ಸಿಗುವ ಸಾಮಗ್ರಿ ಬಳಸಿ ನಾಟಕ ಆಡಿಸುವ, ಅಥವಾ ಭಿತ್ತಿ ಪತ್ರ ಸಿದ್ಧಪಡಿಸುವ ಬಗ್ಗೆ ಸಲಹೆ ಇತ್ಯಾದಿ. ಹಡಪದರಿಗೆ ಯಾವುದೇ ರಾಜಕೀಯ ಬದ್ಧತೆ ಇರಲಿಲ್ಲ, ಆಸಕ್ತಿಯೂ ಇಲ್ಲ. ಎಡ, ಬಲ ಎಂಬುದಕ್ಕಿಂತ ಮಾನವೀಯ ಮೌಲ್ಯಗಳು ಅವರಿಗೆ ಮುಖ್ಯವಾಗಿದ್ದವು. ಸಮುದಾಯದ ಸಂಪರ್ಕದಿಂದ ಹಡಪದರಿಗೆ ಹಲವು ಬಗೆಯಲ್ಲಿ ಪ್ರಯೋಜನವಾಯಿತು. ಸಮಾಜ ವ್ಯವಸ್ಥೆ, ಬದುಕಿನ ಬಗೆಗಿನ ತೀವ್ರ, ಗಂಭೀರ ಆಲೋಚನೆಗೆ ತೊಡಗಿಸಿದ್ದು; ಅಸ್ಪಷ್ಟ ಆಲೋಚನೆ, ವಿಚಾರಗಳಿಗೆ ಖಚಿತತೆ ನೀಡಿದ್ದು; ಬೇರೆ ಬೇರೆ ಕಲಾ ಮಾಧ್ಯಮಗಳ ಬಗ್ಗೆ ಸಮಗ್ರ, ಮೂಲಭೂತ ಚಿಂತನೆಗಳತ್ತ ತೊಡಗಿಸಿದ್ದು; ಕಲೆ ಎಂದರೇನು ಎಂಬ ಹುಡುಕಾಟ, ಕಲೆಯಲ್ಲಿ ಬದುಕನ್ನು ಹೇಳುವುದಿದ್ದರೆ ಆ ಬದುಕಿನ ಹುಟುಕಾಟ, ಹಾಗೆ ಕಲೆ ಬದುಕುಗಳ ಚಿಂತನೆಗೆ ಹಚ್ಚಿದ್ದು. ಇವು ಹಡಪದರ ದೃಷ್ಟಿ ಎಲ್ಲ ರೀತಿಯ ಸಂಕುಚಿತತೆಗಳನ್ನು ಮೀರಿ ಬೆಳೆಯಲು ಸಾಧ್ಯವಾಯಿತು.

ಈ ಬಗೆಯಲ್ಲಿ ಕಲೆಯ ಬಗ್ಗೆ ಜಾಗೃತಿ ಮೂಡಿಸಲು ಹೊಸ ಯೋಜನೆಗಳನ್ನು ಕೈಗೊಂಡರು. ಶಾಲೆಯಿಂದ ಮಾತ್ರವಲ್ಲ, ಹಡಪದರು ರಾಜ್ಯ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದಾಗಲೂ ಕಲೆಯನ್ನು ಸಮಾಜದ ವಿವಿಧ ಸ್ತರದವರಿಗೆ ಮುಟ್ಟಿಸುವ ಕಾರ್ಯಗಳನ್ನು ಮಾಡಿದರು. ಅಕಾಡೆಮಿಯ ವತಿಯಿಂದ, ವಿಶ್ವವಿದ್ಯಾಲಯಗಳ ಸಹಯೋಗದೊಡನೆ, ವಿಶೇಷ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿದರು. ರಾಜ್ಯದ ಮತ್ತು ಹೊರಗಿನ ಕಲಾವಿಮರ್ಶಕರು, ವಿದ್ವಾಂಸರು ನೀಡಿದ ಉಪನ್ಯಾಸಗಳನ್ನು ಸಂಗ್ರಹಿಸಿ ಪ್ರಕಟಿಸಿದರು. ಕಲಾ ರಸಾಸ್ವಾದನ ಶಿಬಿರಗಳನ್ನು ಏರ್ಪಡಿಸಿ, ತಜ್ಞರು ನೀಡಿದ ಉಪನ್ಯಾಸಗಳನ್ನು ಲೇಖನ ರೂಪದಲ್ಲಿ ಬರೆಸಿ, 'ಕಲೆ ಮತ್ತು ರಸಾಸ್ವಾದನೆ' ಗ್ರಂಥ ಪ್ರಕಟಿಸಿದರು. ಅಕಾಡೆಮಿಯ ಪ್ರಕಟಣೆಗಳ ವ್ಯಾಪ್ತಿಯನ್ನು ಹೆಚ್ಚಿಸಿ, ವೈವಿಧ್ಯ ತಂದರು. 'ಸಮೂಹ ಶಿಲ' ಕಲ್ಪನೆ ವಿನೂತನವಾದದ್ದು. ವಾಸ್ತವವಾಗಿ ಅದು ಭಾರತೀಯ ಪರಂಪರೆಯದೆ. ಶಿಲ್ಪಿಗಳ ಶ್ರೇಣಿಯ ಸದಸ್ಯರು ಒಟ್ಟಾಗಿ ಕೂಡಿ ದೇವಾಲಯಗಳನ್ನು ಸಾಂಪ್ರದಾಯಿಕವಾಗಿಯೇ ನಿರ್ಮಿಸುತ್ತಿರಲಿಲ್ಲವೆ. ಈಗ ಇಲ್ಲಿ ಶಿಲ್ಪಿಗಳ ವೈಯುಕ್ತಿಕ ಕಲ್ಪನೆ, ಶೈಲಿ ಮೂಡಿಬಂದಿದೆಯಷ್ಟೆ. ಅಕಾಡೆಮಿಯಲ್ಲಿ ಒಂದು ಗ್ರಾಫಿಕ್ ವಿಭಾಗವನ್ನು ಪ್ರಾರಂಭಿಸಿ ಕಲಾವಿದರಿಗೆ ತರಬೇತಿಯ ಅವಕಾಶ ಕೊಟ್ಟರು.

ವಿದ್ಯಾರ್ಥಿಗಳಿಗೆ ಕಲಿಸುವುದೆಂದರೆ ಹಡಪದರಿಗೆ ತಾವೂ ಕಲಿಯುತ್ತಿರುವ ಭಾವನೆ. ವಿದ್ಯಾರ್ಥಿಗಳಿಗಾಗಿ ಎಂದರೂ ಅವರಿಗೂ ಹೊಸ ಅಭಿವ್ಯಕ್ತಿ ಕ್ರಮ, ತಂತ್ರ, ರೂಪಗಳ ಅರಸುವಿಕೆಯೇ ಆಗುತ್ತಿತ್ತು. ಏಕೆಂದರೆ ಶಿಕ್ಷಕ ತಾನು ನಿಖರವಾಗಿ ತಿಳಿಯದೆ, ಪೃಥಕ್ಕಾಗಿ ವಿಚಾರಗಳನ್ನು ಮಥಿಸದೆ ಬೋಧಿಸುವ ಅರ್ಹತೆ ಪಡೆಯುವುದಿಲ್ಲ ಎಂಬುದು ಅವರ ನಿಲುವು. ಹೀಗಾಗಿ ಹಡಪದರು ಇಲ್ಲಿ ಏಕಕಾಲಕ್ಕೆ ಸೃಜನಶೀಲ ಕಲಾವಿದ, ವಿಮರ್ಶಕ, ಶಿಕ್ಷಕ ಮೂವರೂ ಆಗುತ್ತಿದ್ದರು. ಅಂತಹ ಕಲಾವಿದರು ಅಪರೂಪ.

# 5

To write a symphony is, for me, to construct a world.
- Gustav Mahler

But the ultimate core and source of art remains a secret.
- E.L. Kirchner

## ಕಲೆಯ ಬೆಡಗು

ಬೆಡಗು ಎನ್ನುವ ಶಬ್ದಕ್ಕೆ ಹಲವಾರು ಅರ್ಥ, ಅರ್ಥಛಾಯೆಗಳಿವೆ. ಬೆರಗು, ನಿಗೂಢತೆ, ಸೌಂದರ್ಯ, ಒಗಟು, ರಹಸ್ಯಗಳಲ್ಲದೆ ವಚನಕಾರರಲ್ಲಿ ಅನುಭಾವವೂ ಆಗುತ್ತದೆ. ಕಲೆಗೂ ಇವೆಲ್ಲ ಅನ್ವಯಿಸುತ್ತವೆ.

ಹಡಪದ್ ಅವರು ಒಂದು ಬಗೆಯ ಅಭಿವ್ಯಕ್ತಿ ವಿಧಾನಕ್ಕೆ ಅಂಟಿ ನಿಂತವರಲ್ಲ. ಅವರ ಪ್ರಯೋಗಶೀಲತೆ ಆದಿಕವಿ ಪಂಪ ಹೇಳುವಂತೆ 'ನಿತ್ಯಂ ಪೊಸೆತು ಅರ್ಣವಂಬೊಲ್'. ಜಲವರ್ಣ, ತೈಲವರ್ಣ, ಪೋಸ್ಟರ್ ವರ್ಣ, ಆಕ್ರಿಲಿಕ್, ಪೇಸ್ಟಲ್, ಇಂಡಿಯಾ ಇಂಕ್, ಇದ್ದಿಲು, ಬ್ಲಾಕ್ ಬೋರ್ಡ್ ಕಪ್ಪು, ಇದ್ದಿಲ ಕಡ್ಡಿ ಯಾವುದೇ ಆಗಬಹುದು. ಪೆನ್ಸಿಲ್‌ನಲ್ಲಿ ಒಮ್ಮೆ ಲಾಲ್‌ಬಾಗ್‌ನ ಮರ ಗಿಡ ಬೊಡ್ಡೆ ಹೂಗಳ ನೋಟಗಳನ್ನು ಕುರಿತು ಸಾವಿರ ಕರಡು ರೇಖಾಚಿತ್ರಗಳನ್ನು ರಚಿಸಿದರು. ದಿನಪತ್ರಿಕೆಯ ಕಾಗದದಿಂದ ಭಿತ್ತಿಗಳವರೆಗೆ ಚಿತ್ರಣಕ್ಕೆ ಆಧಾರವಾಗಬಹುದು. ಕಿನ್ನಾಳ ಮರದ ತುಂಟು, ಚಿಕಣಿ ಚಿತ್ರ ಅಳತೆಯಾಗಬಹುದು ಅಥವಾ ಹದಿನಾರು ಅಡಿಗಳ ಭಿತ್ತಿಯಾಗಬಹುದು. ಗ್ರಾಫಿಕ್ಸ್, ಶಿಲ್ಪ ಮಾಧ್ಯಮಗಳಿರಬಹುದು. ಕಣ್ಣು ಮನಸ್ಸು, ಕೈಗಳ ಸಂಯಮ, ಪ್ರಭುತ್ವ ಹಡಪದರಿಗೆ ವಿಶಿಷ್ಟವಾದುದು.

ಅವರ ರಚನೆಗಳಲ್ಲಿ ಜಾನಪದ, ಪಾರಂಪರಿಕ ಶಿಷ್ಟ ಕಲೆಯ ಬೇರುಗಳಲ್ಲದೆ ಪಾಶ್ಚಾತ್ಯ ಚಿಂತನೆಯ ಅಂಶಿಕ ಪ್ರಭಾವಗಳೂ ಸೇರಿಕೊಳ್ಳುತ್ತವೆ. ಪ್ರಭಾವಗಳು ಅವರ ಅಧ್ಯಯನ, ಕಲಾವಿದರ ಬಗೆಗಿನ ವಿಶ್ಲೇಷಣಾತ್ಮಕ ಚಿಂತನೆಗಳ ಸಾಂದರ್ಭಿಕ ಪ್ರೇರಣೆಗಳಷ್ಟೆ. ಎಷ್ಟೋ ವೇಳೆ ಪಾಶ್ಚಾತ್ಯ ಕಲಾವಿದನೊಬ್ಬ ನಿಂತ ನೆಲೆಯಿಂದ ಇವರು ಮುಂದೆ ಸಾಗುತ್ತಾರೆ. ಪಾಯಿಂಟಲಿಸಂ ಅನ್ನು ಆಂಶಿಕವಾಗಿ ಕೆಲವು ಚಿತ್ರಗಳಲ್ಲಿ ಚುಕ್ಕಿ, ಕುಂಚದ ತುಂಡು ಎಳೆತಗಳಲ್ಲಿ ಬಳಸಿದ್ದಾರೆ. ಫಾವಿಸಂನ ವರ್ಣಸಾದೃಶ್ಯ – ವೈದೃಶ್ಯ, ಅಲಂಕಾರಿಕ ಗುಣ ಕೆಲ ರಚನೆಗಳಲ್ಲಿ ಕಂಡು ಬರುತ್ತದೆ. ಬಹುವಾಗಿ ವಿಮರ್ಶಕರು ಹೇಳುವುದು ಎಕ್ಸ್‌ಪ್ರೆಷನಿಸಂ ಬಗ್ಗೆ. ಅದರಲ್ಲೂ ಮಾರ್ಥಾ ಅವರು ಜರ್ಮನ್ ಎಕ್ಸ್‌ಪ್ರೆನಿಸಂ ಪ್ರಭಾವದ ಬಗ್ಗೆ ಹೇಳಿದ್ದಾರೆ. ಈ ಶತಮಾನದ ಪ್ರಾರಂಭದಲ್ಲಿ ಫ್ರಾಯ್ಡ್ ಮತ್ತು ಕಾರ್ಲ್‌ಯುಂಗರು ಅಪ್ರಜ್ಞೆಯ ಆಳವಲಯಗಳ ಬಗ್ಗೆ ವಿಶ್ಲೇಷಿಸಿದರು, ಸಂಶೋಧನೆ ನಡೆಸಿದರು. ಇಂದ್ರಿಯ ವೇದನೆಗಳು, ಗ್ರಹಿಕೆಗಳು, ಆಲೋಚನೆಗಳು, ನೆನಪುಗಳು, ನಿರ್ಣಯಗಳು ಮತ್ತು ಕ್ರಿಯೆಗಳು ಭಾವೋದ್ವೇಗ ಹಾಗೂ ಅಂತಃಸ್ಫುರಣೆಗಳಿಂದ ಪ್ರಭಾವಿತವಾಗಿರುತ್ತವೆ, ಕೂಡಿರುತ್ತವೆ. ನಮಗೆ ಅವುಗಳು ಪ್ರಜ್ಞಾಪೂರ್ವಕವಾಗಿ ಅನುಭವಕ್ಕೆ ಬರುವುದಿಲ್ಲ. ಎಲ್ಲವೂ ರೂಪಾಂತರಗೊಂಡು, ವಿರೂಪಗೊಂಡು, ಸಾಂಕೇತಿಕತೆ ಪಡೆದು, ಸೋಸಿ, ಕೆಲವೊಮ್ಮೆ ಭ್ರಮಾತ್ಮಕವಾಗಿಯೂ ಅನುಭವಕ್ಕೆ ನಿಲುಕಬಹುದು ಎಂದರು ಇವರ ಸಿದ್ಧಾಂತಗಳೇ ಅಭಿವ್ಯಕ್ತಿ ವಾದಕ್ಕೆ ಪ್ರೇರಣೆ. ವಸ್ತು ನಿಷ್ಠತೆಗಿಂತ ವ್ಯಕ್ತಿ ನಿಷ್ಠತೆ, ಭಾವ ನಿಷ್ಠತೆ. ಜರ್ಮನ್ ಎಕ್ಸ್‌ಪ್ರೆಷನಿಸಂನಲ್ಲಿ ಒಬ್ಬೊಬ್ಬ ಕಲಾವಿದನ ಬಗೆ ಬೇರೆ ಬೇರೆ. ಡ್ರೆಸ್ಡ್‌ನ್‌ನ ದಿ ಬ್ರಿಡ್ಜ್ ಪಂಥ, ಮ್ಯೂನಿಕ್‌ನ ದಿ ಬ್ಲೂರೈಡರ್ ಪಂಥ ಮುಂತಾಗಿ ಬಂದುವು. ಯುಗೆಂಡ್ ಸ್ಟಿಲ್ ಎಂಬ ಸಸ್ಯಲೋಕಾಲಂಕಾರಿಕ ಪಂಥವೂ ಮೊದಲು ಬಂದಿತ್ತು. ಭಾವಗೀತಾತ್ಮಕತೆಗೆ ಒತ್ತು. ಅಭಿವ್ಯಕ್ತಿ ವಾದಿಗಳಲ್ಲಿ ಬಹುವಾಗಿ ಕಾಣುವ ವಿಷಾದ ಹಡಪದರಲ್ಲಿಲ್ಲ. ಬದಲು ಹಲವು ರಚನೆಗಳಲ್ಲಿ ನಿರ್ಲಿಪ್ತವಾಗಿ ಸಮಾಜವನ್ನು ಕಾಣುವ ಗುಣ ಇದೆ. ಆದರಿಂದಾಗಿ ವಿಡಂಬನೆ, ವ್ಯಂಗ್ಯ ತರಲು ಸಾಧ್ಯವಾಗಿದೆ. ಒತ್ತಡ, ಭಾವೋದ್ವೇಗ, ವ್ಯಕ್ತಿ ನಿಷ್ಠ ಅಭಿವ್ಯಕ್ತಿ ಗುಣಗಳಿವೆ. ಅವು ಯಾವುದೇ ಪಂಥದವಲ್ಲ. ವಿರೂಪಗೊಳಿಸುವಿಕೆ, ಸಾಂಕೇತಿಕ ಧ್ವನಿ ಶಕ್ತಿ ಜರ್ಮನೇತರ ಅಭಿವ್ಯಕ್ತಿವಾದಿಗಳಲ್ಲೂ ಕಂಡುಬರುವಂಥವು. ಇಲ್ಲೆಲ್ಲಾ ಅವರದು ಅಲಂಕಾರಿಕ ಶೈಲಿ.

ಹೆಬ್ಬಾರರು ಹಡಪದರಿಗಿಂತ ಎರಡು ದಶಕದಷ್ಟು ಹಿರಿಯರು. ಹೀಗಾಗಿ ಹಲವರು ಅವರ ಪ್ರಭಾವ ಗುರುತಿಸಿದ್ದಾರೆ. ಮೈಸೂರು ವಿಶ್ವವಿದ್ಯಾಲಯ ಅವರ ಉಪನ್ಯಾಸಗಳನ್ನು ಪ್ರಕಟಿಸಿದ್ದು 1969ರ ಸುಮಾರಿಗೆ. ಅದರಲ್ಲಿ ಹೆಬ್ಬಾರರ ಕಲಾಚಿಂತನೆಗಳಿವೆ. ಆ ವೇಳೆಗೆ ಹಡಪದರು ಸಾಕಷ್ಟು ಪ್ರಯೋಗ ನಡೆಸಿ ತಮ್ಮ ರೇಖಾ ವಿನ್ಯಾಸಗಳು. ಹಡಪದರದು ಬದ್ಧ ರೇಖೆಗಳು. ಹೆಬ್ಬಾರರು ಮರಚಾಕು ಬಳಸಿ ಮೈವಳಿಕೆ ಸೃಷ್ಟಿಸುವ ವಿಧಾನ ಬೇರೆ. ಹಡಪದ್ ಪ್ಯಾಲೆಟ್‌ನಲ್ಲಿ ಎರಡು ಮೂರು ಬಣ್ಣಗಳನ್ನು ಕುಂಚದಿಂದೆತ್ತಿ ಲೇಪಿಸಿ ಮೈವಳಿಕೆ ತರುವ ವಿಧಾನ ಭಿನ್ನವಾದದ್ದು. ಚಾಪ್ಲಾ ಅಥವಾ ಪಿಕಾಸೊರ ಒಂದರೊಳಗೊಂದು ಸುಳಿದಾಡುವ ರೇಖಾ ವಿನ್ಯಾಸವೂ ಇವರದಲ್ಲ. ಹೆಬ್ಬಾರರ ಹುಂಜಕಾಳಗ ಹಾಗೂ ಹಡಪದರ ಹುಂಜ ಚಿತ್ರ ಹೋಲಿಕೆಯಿಂದ ಹಡಪದರದು

ಅಮೂರ್ತತೆಯತ್ತ ವಾಲುತ್ತದೆಂಬುದು ಸ್ಪಷ್ಟ. ವಿಶ್ವ, ಪ್ರಕೃತಿಪುರುಷ, ಪುರಾಣ ಪ್ರತೀಕ ಮುಂತಾದವು ಯಾವ ಕಲಾವಿದರಿಗಾದರೂ ಸಾಮಾನ್ಯವಾಗಬಹುದಾದುವು. ಹಡಪದರ ಆಕೃತಿ ಚಿತ್ರಗಳಲ್ಲೇ ವೈವಿಧ್ಯವಿದೆ. ಶಿರವಿಲ್ಲದ ಅಥವಾ ಚೂಪುಶಿರದ ಆಕೃತಿಗಳು, ಸಂಯೋಜನೆಯಲ್ಲಿ ಸಾದೃಶ್ಯಕ್ಕೋ ವೈದೃಶ್ಯಕ್ಕೊ ಜೋಡಿ ಜೋಡಿ ಆಕೃತಿಗಳನ್ನು ತರುವ ಬಗೆ ಇವೆಲ್ಲಾ ಹಡಪದರಿಗೇ ವಿಶಿಷ್ಟವಾದುವು.

## ವ್ಯಕ್ತಿ ಚಿತ್ರಗಳು

ಹಡಪದರದು ಅತ್ಯಂತ ವೇಗವಾಗಿ ಅಲ್ಪಾವಧಿಯಲ್ಲಿ ಭಾವಚಿತ್ರ ಅಥವಾ ವ್ಯಕ್ತಿ ಚಿತ್ರಗಳನ್ನು ರಚಿಸುವ ಬಗೆ. ಹಿನ್ನೆಲೆಯನ್ನು ಎಂದೂ ವಿವರಪೂರ್ಣವಾಗಿ ಚಿತ್ರಿಸುವುದಿಲ್ಲ. ಮಸಕು ಮಸಕಾದ ಅಸ್ಪಷ್ಟ ಹಿನ್ನೆಲೆ ಅಥವಾ ವರ್ಣಛಾಯೆಗಳ ಬೀಸು. ಕುವೆಂಪು ಚಿತ್ರದಲ್ಲಿ ಸಾಂಕೇತಿಕ ಅಸ್ಪಷ್ಟ ಸಹ್ಯಾದ್ರಿ ಹಿನ್ನೆಲೆ ಇದೆ. ಇನ್ನೊಂದರಲ್ಲಿ ಕಿಟಕಿಯಾಚೆಯ ನೋಟವೂ ಸಾಂಕೇತಿಕವಾಗುತ್ತದೆ. ಇದರಿಂದಾಗಿ ಮುಖ ಎದ್ದು ಕಾಣತ್ತೆ, ಹೆಚ್ಚು ಭಾವಾಭಿವ್ಯಕ್ತಿ ಸಾಧ್ಯ. ಅವರು ವ್ಯಕ್ತಿ ಚಿತ್ರಗಳನ್ನೆ ತಮ್ಮ ವೈಶಿಷ್ಟ್ಯವಾಗಿಸಿಕೊಂಡಿಲ್ಲವಾದ ಕಾರಣ ಒಂದೊಂದು ವ್ಯಕ್ತಿ ಚಿತ್ರಗಳಲ್ಲಿ ಒಂದೊಂದು ಪ್ರಯೋಗ ಪ್ರಧಾನವಾಗುತ್ತದೆ. ವೈವಿಧ್ಯ ಕಂಡುಬರುತ್ತದೆ. ಚೌಕಳಿ ಬಟ್ಟೆ ಹಾಕಿದ ವ್ಯಕ್ತಿಯ ಮುಖಚಹರೆ ಏನಾಗುತ್ತದೆ ಎಂದು ಚಿಂತಿಸುತ್ತಾರೆ. ಎಲ್ಲ ರಚನೆಗಳಲ್ಲೂ ಹಿನ್ನೆಲೆ ಮತ್ತು ಉಡುಪಿನ ಬಣ್ಣಗಳ ಪ್ರತಿಫಲನ ಮುಖದ ಮೇಲೆ ಆಗಿ ವ್ಯತ್ಯಯಗಳನ್ನು ನೀಡುತ್ತವೆ. ಕಣ್ಣಿನ ಕಾಂತಿ, ಪ್ರಕಾಶವೂ ಮುಖ್ಯವಾಗುತ್ತದೆ. ಒಂದು ಹೆಣ್ಣಿನ ಭಾವಚಿತ್ರದಲ್ಲಿ ಉಜ್ವಲ, ಪಾರದರ್ಶಕ, ಬಿಳಿ ಉಡುಪಿನ ಚಿತ್ತಾರಕ್ಕೇ ಪ್ರಾಧಾನ್ಯ, ಆಕೃತಿ ಮುಖಗಳ ವಿವರಕ್ಕೆ ಹೋಗುವುದಿಲ್ಲ. ಅಕಾಡೆಮಿ ರಿಜಿಸ್ಟ್ರಾರ್ ಆಗಿದ್ದವರ ಚಿತ್ರ ತತ್‌ಕ್ಷಣ ವಾಸ್ತವವಾದಿ ಎನಿಸಿದರೂ ತಲೆಯನ್ನು ದಪ್ಪನಾಗಿಸಿ ವಿರೂಪ ತಂದು ಉತ್ಪ್ರೇಕ್ಷಿಸಿ ಸರ್‍ರಿಯಲಿಸ್ಟ್ ಭಾವನೆ ಮೂಡಿಸುತ್ತಾರೆ. ವ್ಯಕ್ತಿತ್ವಕ್ಕೆ ಅನುಗುಣವಾಗಿಯೂ ಅಹುದು ಪ್ರಯೋಗ ಕಾರಣವಾಗಿಯೂ ಅಹುದು, ಫೋಟೋರಿಯಲಿಸಂಗಿಂತ ದೂರವಾದ ರಚನೆಗಳು. ಮಾರ್ಕೆಟ್ಟಿನ ಒಬ್ಬ ಡಿಕ್ಟೇಟರ್‌ನ ಚಿತ್ರ ಓಲ್ಡ್ ಮಾಸ್ಟರ್ ತಂತ್ರದಲ್ಲಿದೆ. ರೂಪದರ್ಶಿಗಳ ನೆಟ್ಟ ನೋಟದ ಬಗ್ಗೆ ಹಲವು ವಿಮರ್ಶಕರು ಪ್ರಸ್ತಾಪಿಸಿದ್ದಾರೆ. ರೂಪದರ್ಶಿಗೆ ಒಂದು ನಿಲುವು, ಭಂಗಿ ನಿರ್ಧರಿಸಿ ಎತ್ತಲೋ ನೋಡುತ್ತಿರುವಂತೆ, ಆಲಂಕಾರಿಕವಾಗಿ ಚಿತ್ರಿಸುವ ವಿಧಾನ ಇವರದಲ್ಲ. ರೂಪದರ್ಶಿ ಮತ್ತು ಕಲಾವಿದ ಮುಖಾಮುಖಿಯಾದಂತೆ, ನೇರ ಸಂಬಂಧ ಪಡೆದಂತೆ ಚಿತ್ರಣ ಎನಿಸುತ್ತದೆ. ಆದ್ದರಿಂದಲೇ ವ್ಯಕ್ತಿ ಚಿತ್ರಗಳಲ್ಲಿ ಶಿರವನ್ನು ಪ್ರಧಾನವಾಗಿ ಕಾಣುತ್ತೇವೆ. ಮುಖದ ಮೌಲ್ಡ್‌ನಿಂದ ಚಹರೆ, ವ್ಯಕ್ತಿತ್ವಗಳು ಅಭಿವ್ಯಕ್ತಿಗೊಳ್ಳುವ, ಸಾಲಿಡಿಟಿ ಭಾವನೆ ತರುವ ರಚನಾಕ್ರಮ ಅದು. ಆದರೂ ಅವರ ವ್ಯಕ್ತಿ ಚಿತ್ರಗಳ ಬಗ್ಗೆ ವಿರುದ್ಧ ಅಭಿಪ್ರಾಯಗಳಿವೆ. ಹಲವು ಚಿತ್ರಗಳಲ್ಲಿ ವ್ಯಕ್ತಿಗಳ ಹೋಲಿಕೆ ಕಂಡುಬರುವುದಿಲ್ಲ ಎಂದು ಹೇಳಿದ್ದನ್ನು ಕೇಳಿದ್ದೇನೆ. ಇದಕ್ಕೆ ಪ್ರತಿಯಾದ ಅಭಿಪ್ರಾಯ ವ್ಯಕ್ತಿತ್ವದ ಆಳಕ್ಕೆ ಇಳಿಯುವ ಬೆದಕುವ ಆತ್ಮೀಯ ಗುಣಕ್ಕಿಂತ ಬಾಹ್ಯ ಲಕ್ಷಣಗಳಿಗೇ ಒತ್ತು ನೀಡುತ್ತಾರೆ ಎಂಬುದು. ಏನೇ ಇರಲಿ, ಸೂಕ್ಷ್ಮವೇದನಾ ಗುಣ ಅನುಭವಕ್ಕೆ ಬರುತ್ತದೆ. ನಯ

ನುಣುಪಿಗಿಂತ ಬಿರುಸು ಬೀಸುಗಳ ಕಡೆ ಒಲವು, ಕಪ್ಪು ಚರ್ಮದಲ್ಲೂ ಹೊಗರು ಮೂಡಿಸುವ ರೀತಿ. ಡಾ|| ಮೋದಿ, ನಿಜಲಿಂಗಪ್ಪ, ಕುವೆಂಪು, ಗುಬ್ಬಿ ವೀರಣ್ಣ ಮೊದಲಾದ ಪ್ರಸಿದ್ಧ ವ್ಯಕ್ತಿಗಳು, ಕುಕ್ಕೆ, ಲೂಯಿಸ್ ಮೊದಲಾದ ಗೆಳೆಯರು, ವಿದ್ಯಾರ್ಥಿಗಳು, ವಿದೇಶೀಯರ ಭಾವಚಿತ್ರಗಳನ್ನು ಮಾಡಿದ್ದಾರೆ.

## ಭಿತ್ತಿ ಚಿತ್ರಗಳು

ಅರವತ್ತರ ದಶಕದ ಮೊದಲಲ್ಲಿ ಎಸ್.ಆರ್. ಸ್ವಾಮಿ, ಅಂದಾನಿ, ಪತ್ತಾರ್, ಎಸ್.ಎಸ್. ಕುಕ್ಕೆ ಇವರ ಜೊತೆ ಹಡಪದ್ ರಾಜಸ್ಥಾನದ ಬನಸ್ಥಲಿಗೆ ಸಾಂಪ್ರಾದಾಯಿಕ ಭಿತ್ತಿ ಚಿತ್ರಗಳ ತರಬೇತಿಗೆ ಹೋಗಿದ್ದರು. ಆದರಿಂದ ಭಿತ್ತಿ ಚಿತ್ರ ರಚನೆ ಬಗ್ಗೆ ಜ್ಞಾನ ವಿಸ್ತರಿಸಿದರೂ ಪ್ರಯೋಗ ಮಾಡಿದ್ದು ಇಲ್ಲ. ಆದರೆ ಸವಾಲಾಗಿ ಸ್ವೀಕರಿಸಿ ರಚಿಸಿದ ವಿನೂತನ ಭಿತ್ತಿ ಚಿತ್ರ, ಬೆಂಗಳೂರಿನ ಕ್ರೈಸ್ತ ಧರ್ಮದ ಧರ್ಮಾರಾಂ ಕಾಲೇಜಿಗೆಂದು ಮಾಡಿದ್ದು. ಮಿಶ್ರ ಮಾಧ್ಯಮದ ಎತ್ತರವಾದ ಎರಡು ಫಲಕಗಳನ್ನು ಭಿತ್ತಿಗೆ ಕೂಡಿಸಿದೆ. ಹಲಗೆಯ ಮೇಲೆ ಬಟ್ಟೆ ಹಚ್ಚಿ, ಹಿಂಭಾಗಕ್ಕೆ ಬಣ್ಣ ಹಚ್ಚಿ ಗಾಜಿನ ವಿವಿಧಾಕಾರದ ತುಂಡುಗಳು, ಕನ್ನಡಿ ತುಂಡುಗಳು, ಚಿನ್ನ, ಬೆಳ್ಳಿ ಮಿಂಚುಕಾಗದ ಹಚ್ಚಿದ ಗಾಜುಗಳು ಇವನ್ನೇ ಬಳಸಿ ರಚಿಸಿದ ಭಿತ್ತಿಚಿತ್ರ. ಒಂದು ದೃಷ್ಟಿಯಿಂದ stained glass ತಂತ್ರ ಎನ್ನಬಹುದು. ಧರ್ಮಕ್ಕೆ ಹೊಸ ವ್ಯಾಖ್ಯಾನ ನೀಡುವ ರಚನೆ.

ಆಚರಣೆಯೊಂದೇ ಮತ ಧರ್ಮವಲ್ಲ. ಬದುಕು, ಬದುಕನ್ನು ಬದಲಾಯಿಸಿಕೊಳ್ಳುವ ಸೌಕರ್ಯಗಳನ್ನು ಒದಗಿಸಿಕೊಂಡು ನಡೆಯುವ ಬದುಕಿನ ನಿರಂತರ ಕ್ರಿಯೆಯೇ ಧರ್ಮ ಎಂಬ ದೃಷ್ಟಿ ಅಲ್ಲಿ ವ್ಯಕ್ತವಾಗುತ್ತದೆ. ಕ್ರಿಯಾಶೀಲತೆಯಲ್ಲಿ ಧರ್ಮ ಮೂರ್ತವಾಗುತ್ತದೆ. ಎಡಗಡೆಯ ಫಲಕದಲ್ಲಿ ಶಿಲುಬೆ, ಮಸೀದಿ, ದೇವಾಲಯ, ಸೂರ್ಯ ಚಂದ್ರ, ಚಕ್ರ, ತ್ರಿಶೂಲ ಮುಂತಾಗಿ ಎಲ್ಲಾ ಧರ್ಮಗಳ ಪ್ರತೀಕಗಳಿವೆ. ರೋಮ್, ಜಪಾನ್ ಇತ್ಯಾದಿ ಪ್ರಪಂಚ ಸಂಕೇತಗಳಿವೆ. ಬಲಗಡೆಯ ಫಲಕದಲ್ಲಿ ಬುದ್ಧನ ಆಕಾರದಿಂದಲೇ ಯೇಸು ಕ್ರಿಸ್ತನ ಆಕಾರ ಮೂಡಿದಂತಿದೆ. ಬುದ್ಧನೋ, ಕ್ರಿಸ್ತನೋ ಎಂಬ ನೋಟದ ದ್ವಂದ್ವ ಉಂಟಾಗುತ್ತದೆ. ಇಬ್ಬರದೂ ಗ್ರೀಸ್ ಶೈಲಿಯ ಉಡುಪಲ್ಲವೆ. ಉಡುಪಿನಲ್ಲೆ ಡ್ರೇಪರಿಯೊಳಗೆ ವಿನ್ಯಾಸಗಳು ರೂಪಾಂತರಗೊಂಡು ಔದ್ಯಮೀಕರಣದ ವಿಕಾಸ ಚಿತ್ರಣ ಬರುತ್ತದೆ. ಕಾರ್ಖಾನೆ, ಚಕ್ರಗಳು, ಚಲನೆ. ಜೀವನವೆಂದರೆ ಕೇವಲ ನಂಬಿಕೆಗಳಲ್ಲ ಕ್ರಿಯಾಚೈತನ್ಯ ಪಡೆಯುವ ಅನೇಕ ರೂಪಗಳು ಎಂಬ ಭಾವನೆ. ಬುದ್ಧ ಕ್ರಿಸ್ತನ ಕೆಳಗೆ ಕಮಲ ಇದೆ. ಮನುಷ್ಯ ಭಾರವನ್ನು ಹೊತ್ತು ನೀರಿನಲ್ಲಿ ತೇಲಿನಿಲ್ಲುವ ಕಮಲ ಅದು. ಬುದ್ಧ, ಕ್ರಿಸ್ತ ಇಂತಹ ವ್ಯಕ್ತಿಗಳು ಧರ್ಮದ ಪ್ರವೇಶಕ್ಕೆ ಕೇಂದ್ರವಾಗುತ್ತಾರೆ. ಆ ಧರ್ಮವನ್ನು ಬದುಕಿನೊಳಗೇ ಕಂಡುಕೊಳ್ಳಬೇಕು. ಈ ಬಗೆಯ ಅರ್ಥಪೂರ್ಣ ಭಿತ್ತಿಚಿತ್ರ ಅಪರೂಪ. ಇದಲ್ಲದೆ ಇಸ್ರೋಗಾಗಿ ಬಾಹ್ಯಾಕಾಶ ಕುರಿತ ಹದಿನೈದು ಅಡಿ ಆರು ಅಡಿ ಭಿತ್ತಿಚಿತ್ರ ರಚಿಸಿ ಕೊಟ್ಟಿದ್ದಾರೆ.

## ಗಾಜಿನ ಚಿತ್ರಗಳು

ಕರ್ನಾಟಕದ ಬಹುಭಾಗದಲ್ಲಿ ಗಾಜಿನ ಮೇಲಿನ ಚಿತ್ರರಚನಾ ಪದ್ಧತಿ ಇದೆ. ಗುಡಿಗಳಲ್ಲಿ ದೇವ ದೇವತೆಗಳ ಗಾಜಿನ ಚಿತ್ರಗಳಿವೆ. ರಾಜಾ ರವಿವರ್ಮನ ಚಿತ್ರಗಳನ್ನು ಅವನ ನಂತರದ ಕಾಲದಲ್ಲಿ ಗಾಜಿನ ಮೇಲೆ ಅನುಕರಿಸಿ ರಚಿಸಿರುವ ರಚನೆಗಳಿವೆ. ಕೆ.ಜಿ. ಸುಬ್ರಮಣ್ಯಂ ಅವರು ವಿಶಿಷ್ಟ ಅಲಂಕಾರಿಕ ರೂಪದಲ್ಲಿ ಗಾಜಿನ ಚಿತ್ರ ರಚಿಸಿದ್ದಾರೆ. ವಿದ್ಯಾರ್ಥಿಗಳಿಗೆ ಮಾಧ್ಯಮ ಪರಿಚಯಿಸುವ ದೃಷ್ಟಿಯಿಂದ ಎಂದರೂ ಹಡಪದ್ ಒಂದು ಅವಧಿಯಲ್ಲಿ ಅದರಲ್ಲೆ ತೊಡಗಿದ್ದರು. ಬೇರೆ ಬೇರೆ ಕಲಾವಿದರ ಶೈಲಿಗಳನ್ನು ಆಧರಿಸಿ ವ್ಯತ್ಯಯಗಳನ್ನು ತಂದಿರುವ ರಚನೆಗಳಿವೆ. ಮಾತೀಸ್, ಕೆ.ಜಿ. ಸುಬ್ರಮಣ್ಯಂ ಮುಂತಾದವರ ವಿಧಾನ. ನಗ್ನ ಆಕೃತಿಗಳ ರಚನಗಳಿವೆ, ವ್ಯಂಗ್ಯ, ವಿಡಂಬನೆಗಳೂ ಇವೆ, ಅಲಂಕಾರಿಕ ಶೈಲಿಯವೂ ಇವೆ. ಬಾಸ್ ಮತ್ತು ಟೈಪಿಸ್ಟ್, ನಿವೃತ್ತ ಸೈನ್ಯಾಧಿಕಾರಿ, ಕ್ಲಬ್ ಡ್ಯಾನ್ಸರ್ಸ್ ಇತ್ಯಾದಿ. ಇಲ್ಲೂ ಸಹ ಜಲವರ್ಣ, ತೈಲವರ್ಣ, ಎನಾಮಲ್ ಬಣ್ಣಗಳ ಬಗೆ ಬಗೆ ಪ್ರಯೋಗ. ಚಪ್ಪಟೆ ವರ್ಣ ಯೋಜನೆ, ರೂಪಣ ವಿಧಾನಗಳೂ ಕಂಡುಬರುತ್ತವೆ. ಕೊಲಾಜ್‌ನಂತೆ ಕಾಗದ ಬಳಸಿರುವುದಿದೆ.

## ಶಿಲ್ಪಗಳು

ಬಾಲ್ಯದಲ್ಲೆ ಹಡಪದ್ ಶಿಲ್ಪಗಳನ್ನು ರಚಿಸುತ್ತಿದ್ದರು. ಮಣ್ಣೆತ್ತಿನ ಅಮಾವಾಸ್ಯೆ ಸಂದರ್ಭಕ್ಕೆ ಬಸವಣ್ಣ ಮಾಡುತ್ತಿದ್ದರು. ಬಾಗಲಕೋಟೆಯಲ್ಲಿದ್ದಾಗ ಪ್ರೊ॥ ಪಂಚಾಕ್ಷರಪ್ಪ ಅವರ ಆಸಕ್ತಿ ಉತ್ತೇಜನದಿಂದ ಮಾಡಿದ ಮೂರ್ತಿಗಳು. ಬಸವೇಶ್ವರ ಹೈಸ್ಕೂಲಿಗಾಗಿಯೇ ಮಾಡಿದ್ದ ಒಂಬತ್ತು ಅಡಿ ಎತ್ತರದ ಮಣ್ಣಿನ ಬುದ್ಧ ; ಮಹಿಳಾ ಸಂಘಕ್ಕೆ ಸರಸ್ವತಿ, ಗಣಪತಿ ಇತ್ಯಾದಿ. ಇವೆಲ್ಲಾ ಸಾಂಪ್ರಾದಾಯಿಕ ಪದ್ಧತಿಯವು. ಬೆಂಗಳೂರಿಗೆ ಬಂದನಂತರ ಬೇರೆ ಬಗೆಯ ರಚನೆಗಳು. ವೇಸ್ಟ್ ಪೇಪರ್, ಆವೆ ಮಣ್ಣು ಪ್ಲಾಸ್ಟರ್ ಮುಂತಾದ ಮಾಧ್ಯಮಗಳು. ಇಲ್ಲೆಲ್ಲಾ ನವ್ಯ ಕಲೆಯ ಪ್ರಬಾವ ಕಾಣಬಹುದು. ಸರಳೀಕೃತ ಮುಖದ 'ಕೈ' ತೆರೆದ ಬಾಯಿಯ ಮತ್ತೊಂದು ರಚನೆ, ಲೋಹ ಫಿನಿಷ್ ಇರುವ ಪ್ಲಾಸ್ಟರ್ ರಚನೆ ರೈಡರ್, ಹಕ್ಕಿ, ಕೆಳಮುಖ ಮಾಡಿರುವ ನಾಚಿಕೆಯ ಹೆಣ್ಣು, ಡ್ರಮರ್, ಮದರ್ ಅಂಡ್ ಚೈಲ್ಡ್‌ನಲ್ಲಿ ತಾಯಿಯ ಬೆನ್ನಮೇಲೆ ಮಗು ಆತು ಕುಳಿತಿದೆ. ಇವುಗಳಲ್ಲೆಲ್ಲಾ ವಿವರಕ್ಕಿಂತ ಮೂಲಭಾವ, ವಿಚಾರ, ಸತ್ವವನ್ನು ಹಿಡಿಯುವ ವಿಧಾನ, ತಂತ್ರ. ಒರಟಾದ ಮೈವಳಿಕೆಗಳು. ವಿವಿಧ ಕೋನ ನೋಟಗಳ ಸಮೀಕರಣದ ತಂತ್ರದ್ದೂ ಇದೆ. ಬೆಳಕು ಬೇರೆ ಬೇರೆ ಕೋನದಿಂದ ಬಿದ್ದಾಗ ವಿಭಿನ್ನ ಅನುಭವಗಳನ್ನು ನೀಡುತ್ತವೆ, ಈ ಶಿಲ್ಪಗಳು. ರೇಖಾತ್ಮಕವಾಗಿ ನಿರಂತರತೆ, ಸಂಬಂಧ ತರುವುದರ ಮೂಲಕ ರೂಪದ ಸಮತೋಲ ಸಾಧಿಸುವ ಬಗೆ ಇದು. ಹೀಗೆ ಶಿಲ್ಪಗಳಲ್ಲಿ ನೆರಳುಬೆಳಕಿನ, ರಾಶಿ-ತೆರಪುಗಳ ಆಟ ಕಾಣಬರುತ್ತದೆ.

## ಅಮೂರ್ತ ರಚನೆಗಳು

ನವ್ಯಕಲೆ ಎಂದರೆ ಅಮೂರ್ತಕಲೆ ಎಂಬ ಸಾಮಾನ್ಯ ಕಲ್ಪನೆ ಇದೆ. ನವ್ಯಕಲೆ ವಿಶಾಲ

ಅರ್ಥದ ಶಬ್ದ. ಆಧುನಿಕ ಕಾಲದ ಹಲವು ಚಳವಳಿಗಳ, ಪಂಥಗಳ ಫಲ. ಅವುಗಳಲ್ಲಿ ಒಂದು ಬಗೆ ಅಮೂರ್ತ ಕಲೆ. ಆಕೃತಿರಹಿತವಾದ ಆಕಾರಗಳನ್ನು, ರೂಪಗಳನ್ನು, ಇಂದ್ರಿಯಗ್ರಹಿಕೆಗೆ ಅಪರಿಚಿತವಾದುವನ್ನು ಸದ್ಯಕ್ಕೆ ಅಮೂರ್ತಕಲೆ ಎನ್ನಬಹುದು. ಅಕ್ಷರ ನಾಂದಿಯಲ್ಲಿ ಬಾಲಕ ಸೆಗಣಿನೆಲ, ಕೆಂಪುಗೆರೆಗಳಿಂದ ಪಡೆದದ್ದು ಅಂಥ ಒಂದು ಅನುಭವ. ಬಾದಾಮಿಯ ಬಂಡೆಗಳಲ್ಲಿ, ಮೋಡಗಳಲ್ಲಿ ಹಡಪದ್ ಅಮೂರ್ತ ರೂಪಗಳನ್ನು ಗ್ರಹಿಸಿದ್ದಾರೆ. ನಿಸರ್ಗದಲ್ಲೇ ಅಮೂರ್ತತೆ ಇದೆ ಎನ್ನುತ್ತಾರೆ ಅವರು. ಮೌನ, ವೇಗ, ಸುಕುಮಾರತೆ, ಮೃದು ಸ್ಪರ್ಶಾನುಭವ, ಮಿಂಚಿನ ಬೆಳಕು ಶಕ್ತಿಗಳಲ್ಲಿ ಶಕ್ತಿ ಅನುಭವ ಇಂತಹ ನಿಸರ್ಗದಲ್ಲಿ ಆಗುವ ಸೂಕ್ಷ್ಮಾತಿಸೂಕ್ಷ್ಮ ಇಂದ್ರಿಯಾನುಭವಗಳೋಉ ಹಾಗೂ ಮಾನಸಿಕ ಅಮೂರ್ತ ಅನುಭವಗಳನ್ನು ಕಣ್ಣಿನಿಂದ ಕಾಣುವಂತೆ ಅದಕ್ಕೆ ಶಬ್ದ ನೀಡುವುದು, ಆಕಾರ ನೀಡುವುದು, ರೂಪ ಕೊಡುವುದು ಅಮೂರ್ತಕಲೆ. Abstraction ಅಮೂರ್ತೀಕರಣ ಬೇರೆ, ಪರಿಚಿತ ಆಕಾರಗಳನ್ನು ಅದರ ಹಿಂದಿನ ಮೂಲ, ಸತ್ವ, ಕೆನೆಯತ್ತ ತಿರುಗಿಸುವುದು. ಅದೊಂದು ಬಗೆಯ ಪುನಃ ಸೃಷ್ಟಿ. ಎಲ್ಲಾ ಪ್ರಭಾವಗಳನ್ನು ಸ್ವೀಕರಿಸಿ, ಅನಂತರ ಅವನ್ನು ನೀಗಿಸಿಕೊಂಡು ವಸ್ತುಗಳನ್ನು ಅಮೂರ್ತಗೊಳಿಸುವುದು ನಿಜವಾದ ಬೆಳವಣಿಗೆ ಎನ್ನುತ್ತಾರೆ ಹಡಪದ್. ಹಡಪದರು ಈ ಎರಡೂ ಬಗೆಯ ರಚನೆಗಳನ್ನು ಮಾಡಿದ್ದಾರೆ. ದೊಡ್ಡ ಚಿತ್ರಗಳನ್ನು ಬಿಟ್ಟು ಚಿಕ್ಕ ಚಿತ್ರಗಳ ಬಗ್ಗೆ ಮಾತ್ರ ಇಲ್ಲಿನ ಪ್ರಸ್ತಾಪ. 1980ರಲ್ಲಿನ ಪೋಸ್ಟರ್ ಬಣ್ಣ ಮತ್ತು ಇಂಕ್‌ನ ಚಿತ್ರ ಸರಣಿ ಒಂದು. 1987ರ ಸರಣಿಯೊಂದು ಮತ್ತು 1966ರ ಮುದ್ರಣ ಕಪ್ಪು ಬಣ್ಣದ ಕೆಲವು ರಚನೆಗಳು. ಚಿತ್ರದ ಕನಿಷ್ಠ ಘಟಕ ಚುಕ್ಕಿ, ಚುಕ್ಕಿಗಳು ರೇಖೆಯಾಗುತ್ತವೆ. ರೇಖೆ ಮತ್ತು ಬಣ್ಣ ಚಿತ್ರದಲ್ಲಿ ರೂಪ ಸೃಷ್ಟಿಸುವ ಅಂಶಗಳು. ಇವುಗಳಿಂದ ಸೃಷ್ಟಿಯಾದ ರೂಪನಿಷ್ಠ ರಚನೆಗಳನ್ನೇ ಕೆ.ಎಸ್. ಶ್ರೀನಿವಾಸ ಮೂರ್ತಿಯವರು ಹಡಪದರ ಅತ್ಯಂತ ಶ್ರೇಷ್ಠ ಕೃತಿಗಳೆಂದು ಕರೆಯುವುದು. ಹಡಪದರಲ್ಲಿ ರೂಪನಿಷ್ಠ ಒಲವು ಪ್ರಬಲ ಎನ್ನುತ್ತಾರೆ ಅವರು. ಇದಕ್ಕೆ ಇನ್ನೊಂದು ಮಾತು ಸೇರಿಸಬೇಕು. ಭಾವನೆಗಳು, ಅನುಭೂತಿಗಳು feelings ಇಲ್ಲದೆ ಅಮೂರ್ತ ಕಲೆಯಿಲ್ಲ. ಭಾವವಿಲ್ಲದ ರೂಪವಿಲ್ಲ. ರೇಖೆ, ಬಣ್ಣಗಳಿಗೆ ಅವುಗಳದೇ ಆಂತರಿಕ ಭಾವಮೌಲ್ಯಗಳಿರುತ್ತವೆ. ಅವುಗಳನ್ನು ಅಭಿವ್ಯಂಜಿಸುವ ರೂಪುಸೃಷ್ಟಿ. ಹಡಪದರು ನಿಸರ್ಗದಿಂದ ಎಂತೋ ಅಂತೆ ಉದ್ಯಮಗಳಿಂದಲೂ ಯಂತ್ರಗಳಿಂದಲೂ ಅಮೂರ್ತ ರಚನೆಗಳಿಗೆ ಪ್ರೇರಣೆ ಪಡೆದಿದ್ದಾರೆ. ಈ ಚಿತ್ರಗಳ ಅರ್ಥ ದೃಶ್ಯಾನುಭವ ಎಂದರೂ ಒಬ್ಬೊಬ್ಬರಿಗೆ ಒಂದೊಂದು ಬಗೆಯ ಅನುಭವ ಆಗಬಹುದು. ಇವುಗಳ ಅರ್ಥ ಸಾಧ್ಯತೆ ಅಪರಿಮಿತ. ಒಂದರಲ್ಲಿ ಒಳಗಣ್ಣು ಅಥವಾ ಜ್ಞಾನ ಕಣ್ಣು, ಅದರ ಸುತ್ತ ಲಯಬದ್ಧ ವರ್ಣದ ಬೀಸು ಅಲೆಗಳು. ಈ ಸರಣಿಯ ಚಿತ್ರಗಳನ್ನು ನೋಡಿದಾಗೆಲ್ಲ ನನಗೆ ಪಾಶ್ಚಾತ್ಯ ಸಂಗೀತ ರಚನಕಾರ ಆರ್ನಾಲ್ಡ್ ಷೋಯೆನ್‌ಬರ್ಗ್ ವೀಬರ್‌ನ Six Bagattelles ಬಗ್ಗೆ, ಸ್ಟ್ರಿಂಗ್ ಕ್ವಾರ್ಟೆಟ್‌ಗಾಗಿ ರಚಿಸಿದ್ದು, ಹೇಳಿದ ಮಾತುಗಳು ನೆನಪಾಗುತ್ತವೆ. ಹಡಪದರ ಈ ಅಮೂರ್ತ ರಚನೆಗಳಿಗೆ ಎಷ್ಟು ಔಚಿತ್ಯಪೂರ್ಣವಾಗಿ ಹೊಂದುತ್ತದೆ ಎನಿಸುತ್ತದೆ. : "Think of the concision which expression in such brief forms demands ! Every glance is a poem,

every sigh a novel. But to achieve such concentration to express a novel in a single gesture, a great joy in a single breath - every trace of sentimentality must be correspondingly be banished."

## ಇತ್ತೀಚಿನ ಚಿತ್ರಗಳು

ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಫೆಲೋಷಿಪ್ ಪ್ರಯುಕ್ತ ರಚಿಸಿರುವ ಇತ್ತೀಚಿನ ರಚನೆಗಳಲ್ಲಿ ಕೆಲವು ಹೊಸ ಪ್ರಯೋಗಗಳಾಗಿವೆ. ಆಕೃತಿ ರಚನೆ ಇವೆ, ಅಮೂರ್ತ ರಚನೆಯೂ ಇವೆ. ಪ್ರಾದಿಮ ಕಲಾ ಶೈಲಿಯ ಆಧುನಿಕ ರೂಪ ಇವೆ. ಆಯಿಲ್ ಬೌಂಡ್ ಡಿಸ್ಟೆಂಪರ್, ಬ್ಲಾಕ್ ಬೋರ್ಡ್ ಕಪ್ಪು ಬಣ್ಣ ಇತ್ಯಾದಿ ಬಳಸಿದ್ದಾರೆ. ಪಾಯಿಂಟಲಿಸಂ, ಸ್ಟ್ರೋಕ್ಸ್ ಬಳಸಿದ ಚಿತ್ರಗಳೂ ಇವೆ. ಮದರ್ ಥರೆಸಾ ಪಟ್ಟೆ ಸೆರಗಿನ ನಡುವೆ ಮುಖದಲ್ಲಿ, ಅಕ್ಕ ಪಕ್ಕ ನೊಂದವರು. ದೊಡ್ಡ ಚಿತ್ರ. ಗ್ರೋಥ್‌ನಲ್ಲಿ ಜ್ವಾಲೆ ಅನುಭವ, ಗಿಡಮರದ ಪಕಳೆಗಳ ಅನುಭವವಿಲ್ಲದೆ ಯೋನಿ ಕಲ್ಪನೆಯೂ ಬರುತ್ತದೆ. ಅಲ್ಲಿ ಮನುಷ್ಯಾಕೃತಿಗಳೂ ಇವೆ. ಕೇಂದ್ರ ಬೀಜದಿಂದ ಹಬ್ಬುವ ವಿಶ್ವವಿಕಾಸ. ಶೂನ್ಯಾಶೂನ್ಯ ಪದರಗಳ ಮೂಲಕ ಆರಿಜನ್ ಆಫ್ ಯೂನಿವರ್ಸ್‌ನ ಸಿದ್ಧಾಂತ ಸೂಚನೆಯ ಇನ್ನೊಂದು ಚಿತ್ರ. ಅಲ್ಲಿ ವಿಶ್ವದಿಂದ ಮತ್ತೆ ಬದುಕಿನ ಅಸ್ತಿತ್ವಕ್ಕೇ ಬರುವ ಕಲ್ಪನೆ ಇದೆ. ಸಂಗೀತ ಲಯಾನುಭವದ ಒಂದು ರಚನೆ. ಹೆಣ್ಣು ಮತ್ತು ಹಸು ಹುಲಿಗಳ ಚಿತ್ರ 'ಹಾಲು'. 'ಕುಸ್ತಿ' ಘರ್ಷಣೆಯ ಅರ್ಥವನ್ನು ವಿಸ್ತರಿಸುವಂಥದು. ಬೆಳಕಿನೆಡೆಗೆ ಹಾರುತ್ತಿರುವ ಬಾಹ್ಯಾಕಾಶ ನೌಕೆಯ ಒಂದು ಚಿತ್ರವಿದೆ. 'Yellow Cycle' ಬಹುಶಃ ಬಾಲ್ಯದಲ್ಲಿನ ಸೈಕಲ್ ಅಪಘಾತದ ನೆನಪಿನ ಚಿತ್ರ. ಜ್ಯಾಮಿತೀಯ ಆಕಾರಗಳ ರಚನೆಗಳು. ಹಕ್ಕಿ ಹಾರಾಟಲಯ. ಕೆಲವು ಚಿನ್ನ ಕಾಗದದಲ್ಲಿ ರಚಿಸಿದುವು. ಈಜಿಪ್ಟಿನ ಪಿರಮಿಡ್ ಬಳಸಿಕೊಂಡ ನಾಗರೀಕತೆ, ಮನುಷ್ಯ ಸಂಬಂಧಗಳ ಮೂರು ನಾಲ್ಕು ಚಿತ್ರಗಳಿವೆ. ಬ್ಯಾಲೆ ಡ್ಯಾನ್ಸರ್, ಪಾರ್ಕ್, ಭಾರ, ಫಲ ಇತರ ಚಿತ್ರಗಳು. ಹಡಪದ್ ಈಗಲೂ ಪ್ರಯೋಗಶೀಲರಾಗಿಯೇ ಉಳಿದಿದ್ದಾರೆ ಎಂಬುದಕ್ಕೆ ಈ ಚಿತ್ರಗಳು ಸಾಕ್ಷಿಯಾಗಿವೆ.

## ಸಮಾಜ

ಹಡಪದರ ಕಲಾಕೃತಿಗಳಲ್ಲಿ ಕಾಣಬರುವ ರೂಪಾನ್ವೇಷಣೆ ಒಂದು ಶ್ರೇಷ್ಠ ಮೌಲ್ಯ ಎನಿಸಿದರೆ, ಅಲ್ಲಿ ವ್ಯಕ್ತವಾಗುವ ಬದುಕಿನ ಅನುಭವಗಳು ಅಷ್ಟೆ ಮಹತ್ವದ್ದಾಗುತ್ತವೆ. ಅವರಷ್ಟು ಸಾಮಾಜಿಕ ಕಾಳಜಿ ಉಳ್ಳ ಕಲಾವಿದ ಕರ್ನಾಟಕದಲ್ಲಿ ಮತ್ತೊಬ್ಬರಿಲ್ಲ. ''ನಾನು ದಿನಚರಿ ಬರಿಯೋದಿಲ್ಲ ನನ್ನ ಚಿತ್ರಗಳೇ ನನ್ನ ದಿನಚರಿ'' ಎಂದವರು ಅವರು. ವೈಯುಕ್ತಿಕ ಅನಿಸಿಕೆಗಳು, ವ್ಯಕ್ತಿ ಸಮಾಜ ಸಂಬಂಧಗಳು, ಬದುಕಿನ ಘಟನೆಗಳು, ಸಾಮಾಜಿಕ ಚಿಂತನೆ ಎಲ್ಲ ಸೃಜನಶೀಲ ರೂಪದಲ್ಲಿ ವ್ಯಕ್ತವಾಗುತ್ತವೆ. ವೈಯುಕ್ತಿಕ ಬದುಕು ಸಾಮುದಾಯಿಕ ಬದುಕು ಬೆಸೆದು ಹೋಗುತ್ತವೆ. ''ನಾವು ಬೆಳೆಯೋದೆಲ್ಲ ಜನರ ಮಧ್ಯದಲ್ಲಿ, ಅವರಿಂದ ದೂರ ಹೋಗದಂತೆ, ಅವರಿಗೆ ನಿಲುಕುವಂತೆ ಬೆಳೆಯುವುದಿದೆಯಲ್ಲ ಅದು ಬೆಳವಣಿಗೆಯ ನಿಜವಾದ ಲಕ್ಷಣ''

ಎನ್ನುತ್ತಾರೆ. ಈ ಸಾಮಾಜಿಕ ಎಚ್ಚರ ಅವರ ಸ್ವಭಾವದಲ್ಲೆ ಇರುವಂಥದು. ಕಲೆ ಅವರ ಉಸಿರು ಎನ್ನುವಾಗ ನಿಸರ್ಗ ಮತ್ತು ಅಲ್ಲಿನ ಬದುಕಿನಿಂದ ಹೊರತಾಗಿ ಕಲೆ ಇರಲು ಸಾಧ್ಯವಿಲ್ಲ. Arnold Hauser ಮಾತುಗಳನ್ನು ಗಮನಿಸಬೇಕು, ರೂಪ ಹಾಗೂ ರಚನಾ ವಿಧಾನಕ್ಕೆ ಸಂಬಂಧಿಸಿದ ಸಮಸ್ಯೆಗಳೇ ಕಲಾಕೃತಿಗಳಲ್ಲಿ ಮುಖ್ಯವಲ್ಲ ಎಂದು ಹೇಳುತ್ತಾ : "... The problems turnup in the course of creating works to answer questions having little connection with formal and technical problems - questions of world-out look, of conduct of life, of faith and knowledge" ಎಂದು ಅಭಿಪ್ರಾಯ ಪಡುತ್ತಾನೆ. ಹಡಪದರ ಸಂಯೋಜನೆಗಳಲ್ಲಿನ ಸಂಕೀರ್ಣತೆ ವಿಷಯ ಸಂಕೀರ್ಣತೆಯನ್ನು ವ್ಯಕ್ತಪಡಿಸುತ್ತ ಅರ್ಥ ಸಾಧ್ಯತೆಗಳನ್ನು ಹೆಚ್ಚಿಸುತ್ತದೆ.

ಶ್ರೇಣೀ ಕೃತ ಸಮಾಜದಲ್ಲಿ ಹಡಪದ್ ಬಹುವಾಗಿ ಕಹಿಯನ್ನೇ ಉಂಡವರು. ವರ್ಣ ವರ್ಗ ಪಕ್ಷಪಾತ ಸಂಘರ್ಷಗಳ ಹಿನ್ನೆಲೆಯಲ್ಲೆ ಚಿಕ್ಕಂದಿನಿಂದ ಬೆಳೆದವರು. ಬಾದಾಮಿ ಮತ್ತು ಬಾಗಲಕೋಟೆಗಳಲ್ಲೆ ಭೇದ ಭಾವನೆಗಳನ್ನು ಕಂಡಿದ್ದರು. ತಮ್ಮ ಮಿತಿಯಲ್ಲೆ ಆ ಬಗ್ಗೆ ಜಾಗೃತಿ ಮೂಡಿಸುವ ಸಂಘಟನಾ ಕಾರ್ಯಗಳನ್ನೂ ನಡೆಸಿದರು. ಹೈಸ್ಕೂಲಿನಲ್ಲಿದ್ದಾಗಲೇ ವಯಸ್ಕರ ಶಿಕ್ಷಣ ಕಾರ್ಯ ಮಾಡಿದರು. ಓಣಿಗಳನ್ನು ಹಂಚಿಕೊಂಡು ಅಕ್ಷರ ಕಲಿಸುವುದು, ಕಥೆ, ಹಾಡು ಹೇಳುವುದು, ನಾಟಕ ಆಡಿಸುವುದು ಇತ್ಯಾದಿ. ರಸ್ತೆ ರಿಪೇರಿ ಮುಂತಾಗಿ ಸಾಮಾಜಿಕ ಚಟುವಟಿಕೆಗಳು. ಇವೆಲ್ಲ ಸ್ವಯಂಪ್ರೇರಿತ ಕಾರ್ಯಗಳು, ಸರ್ಕಾರದ ವತಿಯಿಂದ ಮಾಡಿದುವಲ್ಲ. ಬೆಂಗಳೂರಿನ ಕೆನ್ ಕಲಾ ಶಾಲೆಗೆ ಕರ್ನಾಟಕದ ಉತ್ತರದ ತುದಿಯಿಂದಲೂ ಬಡ ವಿದ್ಯಾರ್ಥಿಗಳು ಕಲಿಯಲು ಬರುತ್ತಿದ್ದರು. ಶಾಲೆಯಲ್ಲೆ ಅವರಿಗೆ ತಾತ್ಕಾಲಿಕ ಆಶ್ರಯ ನೀಡಿ, ಪುರಿ ಬ್ರೆಡ್ಡು ಹಂಚಿಕೊಂಡು ಬದುಕುತ್ತ ಅವರನ್ನು ಬೆಳೆಸಿದ್ದಾರೆ. ಫ್ಯಾಷನ್‌ಗಾಗಿ ಕಲಾಭ್ಯಾಸ ಮಾಡುವ ಶ್ರೀಮಂತ ವಿದ್ಯಾರ್ಥಿಗಳು ಅವರ ಬಳಿ ಬರುತ್ತಿದ್ದುದು ಕಡಿಮೆ. ಸಮುದಾಯ ಸಂಪರ್ಕದ ನಂತರ ಜನಜಾಗೃತಿಗೆ ಕಲಾ ಮಾಧ್ಯಮವನ್ನು ಸೃಜನಶೀಲವಾಗಿ ಹೆಚ್ಚು ಬಳಸಿದರು. ಅವರ ದೊಡ್ಡ ಚಿಕ್ಕ ವರ್ಣಚಿತ್ರ, ರೇಖಾಚಿತ್ರಗಳಲ್ಲೆಲ್ಲ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಪ್ರಜ್ಞೆ ರೂಪಕಾಳಜಿಗಳ ಭಾಗವಾಗಿಯೇ ವ್ಯಕ್ತವಾಗುತ್ತದೆ. ಹೇಳಿಕೆಯಾಗಿ, ಉಪದೇಶವಾಗಿ, ಪ್ರಚಾರವಾಗಿ ಪ್ರತ್ಯೇಕ ನಿಲ್ಲುವುದಿಲ್ಲ.

ಔದ್ಯಮೀಕರಣದಿಂದ ಸಮಾಜದ ಮೌಲ್ಯಗಳೆಲ್ಲ ವ್ಯತ್ಯಸ್ತವಾದವು. ಉದ್ಯಮಿಗಳ ಕಾರ್ಮಿಕ ವಿರೋಧಿ ನೀತಿಗಳಿರಲಿ, ಶೋಷಣೆಯ ಅನಂತ ಬಗೆಯ ಚಿತ್ರಣವಿರಲಿ ಹಡಪದ್ ಕಾರ್ಖಾನೆ, ಉದ್ಯಮಗಳ ಉಪಯುಕ್ತತೆಯನ್ನು ಗಮನಿಸುತ್ತಲೇ ಅದು ಹೇಗೆ ಮಾನವೀಯತೆಗೂ ಮಾರಕವಾಯಿತು ಎಂಬುದನ್ನು ಹೇಳುತ್ತಾರೆ. ಲಾಭ ಆದಾಯಗಳನ್ನು ಲೆಕ್ಕ ಹಾಕುತ್ತ ಕುಳಿತ ವ್ಯಕ್ತಿಯ ತಲೆಯಿಂದ ಹೊಗೆ ಎದ್ದಿದೆ, ಒಂದು ರಚನೆಯಲ್ಲಿ. ಹೊಗೆ ನಡುವೆ ಉರುಳಾಡಿ ಬದುಕುವ ಕಾರ್ಮಿಕರು, ಅವರ ಜೀವ ಸತ್ವವೆಲ್ಲ ಉದ್ಯಮಿಯ ಮೂಲಕ ಹೊಗೆಯಾಯಿತೆ? ಹಾಗೇ ಕಾರ್ಮಿಕ ಸಂಘ ಪ್ರತಿನಿಧಿಗಳ ಬಗೆಗೂ ವಿಡಂಬಿಸಿದ್ದಾರೆ.

ಸಿದ್ಧಾಂತ, ಆಶಯಗಳು ಬೇರೆ; ವಾಸ್ತವ ಬೇರೆ. ಕಾರ್ಮಿಕರಿಂದ ಮಾಲೀಕರಿಂದ ಇವರೂ ಶೋಷಿಸುತ್ತಾರೆ ಎಂಬುದು ಎರಡು ಮೂರು ಚಿತ್ರಗಳಲ್ಲಿದೆ. ನೇಗಿಲು, ಒಕ್ಕಲಿಗರು, ಕಪ್ಪು ಕನ್ನಡಕದ ಮಧ್ಯವರ್ತಿಗಳ ಚಿತ್ರದಲ್ಲಿ ಮತ್ತೆ ಶೋಷಿತ ಬಡರೈತ ಮೊರೆಹೋಗುವುದು ನಿಸರ್ಗವನ್ನೆ. ರೈತರು-ನಿಸರ್ಗ-ಸಮಾಜ ಕುರಿತ ಅನೇಕ ಚಿತ್ರಗಳೇವೆ. ಹಾಗೇ ರಾಜಕೀಯ ಚಿಂತನೆಗಳು. ನೊಂದವರನ್ನು , ತುಳಿತಕ್ಕೆ ಒಳಗಾದವರನ್ನು ಚಿತ್ರಿಸುತ್ತಲೇ ಮಾನವೀಯ ಮೌಲ್ಯ ಅವರಿಗೆ ಮುಖ್ಯವಾಗುತ್ತೆ, ರಾಜಕೀಯ ಬದ್ಧತೆ ಅಲ್ಲ. ತುಳಿತಕ್ಕೆ ಒಳಗಾಗುವವರು ಯಾರಾದರೂ ಆಗಿರಬಹುದು. ಒಂದರಲ್ಲಿ ಅಂಗಾಂಗಗಳೆಲ್ಲ ಕಳಚಿ ಬಿದ್ದಿದೆ, ತುಳಿದವರು ಹೀರೋಗಳಾಗಿದ್ದಾರೆ. ಹಡಪದರಿಗೆ ಗಾಂಧೀಜಿ ಒಬ್ಬ ವ್ಯಕ್ತಿಯಲ್ಲ, ಸಮಗ್ರತೆಯ ಸಂಕೇತ. ಗಾಂಧೀಜಿ ಆಕೃತಿಯೊಡನೆ, ಅವರ ಆದರ್ಶಗಳ ಅಂತ್ಯದ ದೃಶ್ಯವೂ ಹೆಣೆದುಕೊಳ್ಳುತ್ತದೆ, ರಾಜಕೀಯ ಕೈವಾಡಗಳು, ಸ್ತ್ರೀ ಲೋಲುಪತೆ ಇತ್ಯಾದಿ. ಒಂದು ಚಿತ್ರದಲ್ಲಿ ಕುರ್ಚಿ, ನಾಲ್ಕೈದು ಜನ ತೆವಳುತ್ತಿದ್ದಾರೆ, ಕೆಳಗೆ. ಕುರ್ಚಿ ಕೆಳಗೆ ತೂರಾಡುವ ಆದರೆ ಕುರ್ಚಿಯಲ್ಲಿ ಕೂರಲಾಗದ ರಾಜಕೀಯ ವ್ಯಕ್ತಿಗಳು. (ಕಿಸ್ಸಾ ಕುರ್ಸಿ ಕಾ) ಇನ್ನೊಂದು ರಚನೆಯಲ್ಲಿ ಹುಲಿಗುಣದ ಒಬ್ಬಾಕೆ ಕುಳಿತಿದ್ದಾಳೆ, ಸುತ್ತಲೂ ಖಾಲಿ ಕುರ್ಚಿಗಳು. ಕೈಕಾಲು ಕಟ್ಟಿ, ಬಾಯಿ ಕಟ್ಟಿ, ಎದುರಿಗೆ ಅನ್ನವಿಟ್ಟು ತಿನ್ನು ಎನ್ನುವ ತುರ್ತುಪರಿಸ್ಥಿತಿ ಅನುಭವಗಳು. ಮನುಷ್ಯ ಮತ್ತು ಸಮಾಜದ ಸಂಬಂಧಗಳ ಚಿತ್ರಗಳಲ್ಲಿ ಪ್ರೀತಿಯ ಮಹತ್ವ ಎದ್ದು ಕಾಣುತ್ತದೆ.

ಕುಟುಂಬ ಹಾಗೂ ಗಂಡು ಹೆಣ್ಣು ಸಂಬಂಧಗಳ ಬಗ್ಗೆ ಅಸಂಖ್ಯ ಚಿತ್ರಗಳನ್ನು ರಚಿಸಿದ್ದಾರೆ. ಹೆಣ್ಣನ್ನು ಕುರಿತೇ ಹಲವು ಘಟ್ಟದ, ಬದಲಾದ ವಿಚಾರಗಳ, ದೃಷ್ಟಿಗಳ ಚಿತ್ರಗಳಿವೆ. ಹೆಣ್ಣು ನಿಸರ್ಗದ, ಸಮಾಜದ ಒಂದು ವಸ್ತುವಿನಂತೆ ಆರಂಭದಲ್ಲಿ ಚಿತ್ರಿತವಾಗಿದ್ದಾಳೆ. ರೂಪಕ್ಕಾಗಿ, ವಿನ್ಯಾಸಕ್ಕಾಗಿ, ಸೌಂದರ್ಯ ದೃಷ್ಟಿಯಿಂದ ಆಕೆಯ ಬಳಕೆ. ಅನಂತರದ ರಚನೆಗಳಲ್ಲಿ ಆಕೆಯೂ ಒಬ್ಬ ವ್ಯಕ್ತಿ ಬದುಕಿನಲ್ಲಿ ಆಕೆಗೂ ನೋವು ನಲಿವುಗಳಿವೆ, ಆಸೆ ಆಕಾಂಕ್ಷೆಗಳಿವೆ ಎಂಬ ಚಿತ್ರಣ. ಕಾಲದುದ್ದಕ್ಕೂ ಹೆಣ್ಣಿಗಾಗಿರುವ ಅನ್ಯಾಯಗಳು. ಕೆಲವು ರಚನೆಗಳಲ್ಲಿ ಹೆಣ್ಣು ಸಂಕೇತವಾಗುತ್ತಾಳೆ, ಮನಸ್ಸಿನಾಳದ ಶಾಂತ ಅನುಭವಗಳಿಗೆ. ಕ್ಯಾಬರೆ ನರ್ತಕಿ ಬಹುಶಃ ಪುಢಾರಿಗಳ ತಲೆಗಳ ಮೇಲೆ ನರ್ತಿಸುತ್ತಿರುವ ಒಂದು ರಚನೆ. ಅಲ್ಲಿ ಹೆಣ್ಣು ಭೋಗದ ಮನರಂಜನೆಯ ವಸ್ತು. ಮುಂಬಯಿಯ ರೆಡ್‌ಲೈಟ್ ಬದುಕಿನ ಇನ್ನೊಂದು ಚಿತ್ರ. ಗಂಡ-ಹೆಂಡತಿಯ ಇಜ್ಜೋಡಿನ ಚಿತ್ರ ಒಂದು ಬಗೆಯಾದರೆ ಸಮರಸ ದಾಂಪತ್ಯದ ಚಿತ್ರಗಳೂ ಇವೆ.

ಒಂದು ಸಂದೇಹ. ಹಡಪದರ ಅನೇಕ ಚಿತ್ರಗಳಲ್ಲಿ ಮನುಷ್ಯ ಆಕೃತಿಗಳ ಕೈಕಾಲುಗಳ ಚಿತ್ರಣ ಶೈಲೀಕೃತ ಎನಿಸುತ್ತದೆ. ಹರಡಿದ ಬೆರಳುಗಳ ಹಸ್ತ, ಪಾದಗಳು ಒಂದು ಬಗೆಯ ನೋವಿನ ತಳಮಳದ, ನಿಸ್ಸಹಾಯಕತೆಯನ್ನು ವ್ಯಕ್ತಪಡಿಸುತ್ತವೆ. ಇವೂ ಅರ್ಥವಾಗುತ್ತವೆ.

ನನ್ನ ಹಳ್ಳಿಯ ಜನರು, ಬಣ್ಣದ ಚಿಟ್ಟೆಗಳು, ಗಾಳಿಪಟಗಳು, ಭಯೋತ್ಪಾದಕರು,

ಕರ್ನಾಟಕದ ನಿರ್ಮಾಪಕರು, ರಾಜ-ರಾಣಿ, ಫ್ಯಾಷನ್, ಪಿರಮಿಡ್ ಮುಂತಾದ ಇತರ ವೈವಿಧ್ಯಮಯ ಚಿತ್ರ ಸರಣಿಗಳಿವೆ. ಹಿಂದಿನ ಸರಣಿ ವಿಧಾನವನ್ನು ಮುರಿಯುತ್ತಲೇ ಹೊಸ ಸರಣಿ ರಚನೆಗೆ, ಹೊಸ ಸಂಯೋಜನಾ ರಚನೆಗೆ ತೊಡಗುವುದು ಅವರ ಸ್ವಭಾವ.

## ಧರ್ಮ

ನೋವಿನಲ್ಲಿ ಧರ್ಮ ಹುಟ್ಟುತ್ತೆ ಎನ್ನುತ್ತಾರೆ ಹಡಪದ್. ಮತ ಧರ್ಮ ಸಂಬಂಧಿತ ಅವರ ಚಿಂತನೆಗಳು ಹಲವಾರು ಚಿತ್ರಗಳಲ್ಲಿ ಹಂಚಿಹೋಗಿವೆ. ಒಂದು ಮತೀಯ ಚೌಕಟ್ಟಿನಲ್ಲೇ ಬೆಳೆದರೂ ಆಚರಣೆಗಳನ್ನೂ ನಂಬಿಕೆಗಳನ್ನೂ ಪ್ರಶ್ನಿಸುತ್ತ ಬಂದವರು. ಹಡಪದ್ ನಾಸ್ತಿಕರಲ್ಲ, ಅಜ್ಞೇಯತಾವಾದಿ. ಎಂದೂ ದೇವಸ್ಥಾನ, ಪೂಜೆ ಎಂದು ಅನುಸರಿಸಿದವರಲ್ಲ. ಆದರೆ ಪರಿಶುದ್ಧ ಜೀವನ, ವ್ಯಕ್ತಿತ್ವ. ಯಾವ ದುಶ್ಚಟಗಳೂ ಇಲ್ಲದ ವ್ಯಕ್ತಿ. ಪ್ರೀತಿ, ನೀತಿಗಳೇ ಅವರ ಮೌಲ್ಯ, ದೈವ. ವೈಜ್ಞಾನಿಕ ಪ್ರಗತಿಯ ಚಿತ್ರಗಳನ್ನು ರಚಿಸಿರುವಂತೆ, ಧಾರ್ಮಿಕ ವ್ಯಕ್ತಿಗಳ ಆಡಂಬರ ಮುಖವಾಡಗಳ ವಿಡಂಬನೆ ಮಾಡಿದ್ದಾರೆ. ಹಡಪದ್ ವಿದ್ವಾಂಸರಲ್ಲ, ಆದರೆ ಅವರ ಧಾರ್ಮಿಕ ಚಿಂತನೆಗಳು ಅನುಭವದಿಂದ ಮೂಡಿದವು. ಮನುಷ್ಯನ ಒಳಗಿರುವ ಪ್ರೀತಿಯ ಕಿಡಿ, ನೈತಿಕ ಮಾನವೀಯ ಮೌಲ್ಯಗಳ ಮೈತೊಟ್ಟು ಬದುಕನ್ನು ಆವರಿಸಿರುವಂಥದು. ಆದ್ದರಿಂದ ಮತೀಯ ಚೌಕಟ್ಟನ್ನು ಮೀರಿದ್ದು ಅವರ ಧಾರ್ಮಿಕ ದೃಷ್ಟಿ. ನಿಸರ್ಗದಲ್ಲಿ ಆ ಪ್ರೀತಿ ಇದೆ, ಧಾರಾಳತನವಿದೆ. ಅದು ಸಮಾಜದಲ್ಲೂ ಅಳವಡಬೇಕು. ಅವರ ಧರ್ಮ ಸಂಬಂಧಿತ ಕಲಾ ಕೃತಿಗಳಲ್ಲಿ ವೈಚಾರಿಕ ದೃಷ್ಟಿ ಕಂಡುಬರುತ್ತದೆ. ಆದರೆ ತಮ್ಮ ಚಿಂತನೆಗಳನ್ನು ವ್ಯಕ್ತಪಡಿಸುತ್ತಾರೆಯೇ ಹೊರತು, ತೀರ್ಪನ್ನು ನೋಡುಗರಿಗೇ ಬಿಡುತ್ತಾರೆ. ಗ್ರಾಮ ದೇವತೆಗಳನ್ನು ಚಿತ್ರಿಸಿದ್ದಾರೆ, ಅರ್ಧನಾರೀಶ್ವರ ಕಾರ್ತಿಕೇಯರನ್ನು ಬರೆದಿದ್ದಾರೆ, ಬುದ್ಧ ಕ್ರಿಸ್ತರನ್ನು ರಚಿಸಿದ್ದಾರೆ, ಸಂತ ಮಹಾತ್ಮರನ್ನೂ ತಮ್ಮ ಕೃತಿಗಳಲ್ಲಿ ಬಳಸಿದ್ದಾರೆ. ಧರ್ಮ ಎಂದರೇನು ಎಂದು ಚಿಂತಿಸುವ ಹಲವು ಸಂಯೋಜನೆಗಳು ಅಂತಿಮವಾಗಿ ಬದುಕಿನ ಕ್ರಿಯೆ, ಬದುಕಿನ ಪ್ರೀತಿಯಲ್ಲಿ ಸೂಚ್ಯವಾಗುತ್ತದೆ. ಮತೀಯ ಸಂಘಟನೆ. ಮತ ಸಂಸ್ಥೆಗಳನ್ನು ಬಾಬಾಗಳನ್ನು ವಿಡಂಬಿಸಿದ್ದಾರೆ. ಗುಂಪಿನಲ್ಲಿ ದೇವರ ಬಗ್ಗೆ ಯೋಚಿಸಲು ಸಾಧ್ಯವಿಲ್ಲ, ಧರ್ಮ ವ್ಯಾಪಾರದ ಸರಕಲ್ಲ, ಧರ್ಮ ವೈಯಕ್ತಿಕ ಸಾಧನೆ, ಪ್ರಾಮಾಣಿಕ ಬದುಕಿನಲ್ಲಿದೆ ಎಂಬುದು ಅವರ ಆಶಯ. ಧರ್ಮಾರಾಂ ಕಾಲೇಜಿನ ಭಿತ್ತಿ ಪತ್ರದ ಬಗ್ಗೆ ಹೇಳಿದೆ. ಇತ್ತೀಚೆಗೆ ಬಾಹ್ಯಾಕಾಶ ಯಾನ, ವಿಶ್ವ ಕಾಲ-ದೇಶ ಮತ್ತು ಅವುಗಳೊಡನೆ ಮನುಷ್ಯ ಸಂಬಂಧಗಳ ಬಗ್ಗೆಯೂ ಚಿತ್ರ ರಚಿಸಿದ್ದಾರೆ. ಸೃಷ್ಟಿಯ ಆವರ್ತನ ಕ್ರಿಯೆಯ ಬಗ್ಗೆ ಹಲವು ಕೃತಿಗಳಿವೆ. ಪ್ರಕೃತಿಯ ಬೀಜ ಚಿಗುರು ಮರ ನಾಶಗಳ ಹಿಂದೆಯೇ ಪುನರ್‌ಸೃಷ್ಟಿ ಚೈತನ್ಯವನ್ನೂ ಕಾಣುತ್ತಾರೆ. ಈ ಎಲ್ಲದರ ನಡುವೆ ಮನುಷ್ಯನ ಪಾತ್ರವನ್ನು ಕಾಣಿಸುತ್ತಾರೆ. ಮನುಷ್ಯನ ಬದುಕು, ಅಸ್ತಿತ್ವ, ಸಾಮಾಜಿಕ ಸಮಸ್ಯೆಗಳ ಆಚೆಗೂ, ಮತೀಯ ಸಂಕುಚಿತತೆಗಳ ಆಚೆಗೂ ಅವರ ಕಣ್ಣು ಹಾಯುತ್ತದೆ. ಹಡಪದರ ಕಲಾ ಸೃಷ್ಟಿ ಬದುಕನ್ನು ತಬ್ಬಿಕೊಳ್ಳುತ್ತದೆ, ವಿಶ್ವವನ್ನು ಅಪ್ಪಿಕೊಳ್ಳುತ್ತದೆ.

## ಜೀವನ - ಸಾಧನೆ

1936 ಜನನ, ಬಾದಾಮಿ, ಕರ್ನಾಟಕ
1958 ಜಿ.ಟಿ. ಆರ್ಟ್, ಜೆ.ಜೆ. ಕಲಾ ಶಾಲೆ, ಮುಂಬಯಿ
1959 ಆರ್ಟ್ ಮಾಸ್ಟರ್, ಕರ್ನಾಟಕ
1963 ಪ್ರಥಮ ಏಕವ್ಯಕ್ತಿ ಕಲಾ ಪ್ರದರ್ಶನ, ಬೆಂಗಳೂರು
ಹೈದರಾಬಾದ್, ಮುಂಬಯಿ, ಬೆಂಗಳೂರು, ಧಾರವಾಡ
ಮುಂತಾದ ಸ್ಥಳಗಳಲ್ಲಿ 20ಕ್ಕೂ ಹೆಚ್ಚು ಏಕವ್ಯಕ್ತಿ
ಕಲಾ ಪ್ರದರ್ಶನಗಳು.
1964 ವಿಶೇಷ ತರಬೇತಿ, ಭಿತ್ತಿ ಚಿತ್ರಕಲೆ, ಬನಸ್ಥಲಿ, ರಾಜಸ್ಥಾನ
1964, 66 'ನಾವು ನಾಲ್ವರು' ಕಲಾ ಪ್ರದರ್ಶನ
1967, 68, 69 'ನಾವು ನಾಲ್ವರು+' ಕಲಾ ಪ್ರದರ್ಶನ
1970 ಸಮೂಹ ಕಲಾ ಪ್ರದರ್ಶನ : ಆಸ್ಟಿನ್, ಟೆಕ್ಸಾಸ್, ಯು.ಎಸ್.ಎ.
1979, 92 ಜರ್ಮನಿಯ ಹೈಡಲ್‌ಬರ್ಗ್‌ನಲ್ಲಿ ಏಕ ವ್ಯಕ್ತಿ ಕಲಾ ಪ್ರದರ್ಶನ.
ಒಂದು ತಿಂಗಳು ಕಲಾ ಶಿಬಿರದಲ್ಲಿ ಭಾಗವಹಿಸಿದ್ದು.

## ಪ್ರಶಸ್ತಿ - ಗೌರವ

ಕರ್ನಾಟಕ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ
ದಸರಾ ಕಲಾ ಪ್ರದರ್ಶನ ಬಹುಮಾನ
ಅಖಿಲ ಭಾರತ ಲಲಿತಕಲಾ ಮತ್ತು ಕುಶಲಕಲಾ ಪ್ರಶಸ್ತಿ
1987-90 ಅಧ್ಯಕ್ಷರು, ಕರ್ನಾಟಕ ಲಲಿತಕಲಾ ಅಕಾಡೆಮಿ
ಸದಸ್ಯರು, ಕೇಂದ್ರ ಲಲಿತಕಲಾ ಅಕಾಡೆಮಿ, ದೆಹಲಿ
ಸದಸ್ಯರು, ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರ, ತಂಜಾವೂರು
ಸದಸ್ಯರು, ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರ, ನಾಗಪುರ
1992-95 ಸೆನೆಟ್ ಸದಸ್ಯರು, ಹಂಪಿ ಕನ್ನಡ ವಿಶ್ವವಿದ್ಯಾಲಯ
1995 ಫೆಲೋಷಿಪ್, ಕರ್ನಾಟಕ ಲಲಿತಕಲಾ ಅಕಾಡೆಮಿ
1996 ಬೆಂಗಳೂರು ಕೆಂಪೇಗೌಡ ಪ್ರಶಸ್ತಿ 'ಸಂಯೋಜಿತ' ಸನ್ಮಾನ
1997 ಗೌರವ ಡಿ.ಲಿಟ್ ಪ್ರಶಸ್ತಿಯಾದ 'ನಾಡೋಜ' ಪ್ರಶಸ್ತಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಕಲಾ ಸಂಗ್ರಹ

ರಾಷ್ಟ್ರೀಯ ಕಲಾ ಸಂಗ್ರಹಾಲಯ, ನವದೆಹಲಿ
ಕೇಂದ್ರ ಲಲಿತಕಲಾ ಅಕಾಡೆಮಿ, ನವದೆಹಲಿ
ಲಲಿತಕಲಾ ಅಕಾಡೆಮಿಗಳು, ಗೋವಾ, ಮದ್ರಾಸ್
ಇಸ್ರೋ, ಧರ್ಮಾರಾಂ ಕಾಲೇಜು, ಬೆಂಗಳೂರು
ಜಾನಪದ ಲೋಕ, ರಾಮನಗರ
ಖಾಸಗಿ ಸಂಗ್ರಹ ಮತ್ತು ಸಂಗ್ರಹಾಲಯಗಳು : ಭಾರತ,
ಇಂಗ್ಲೆಂಡ್, ಯು.ಎಸ್.ಎ., ಜರ್ಮನಿ ದೇಶಗಳಲ್ಲಿ



'ಒರಗಿದ ಹೆಣ್ಣು' ಪೋಸ್ಟರ್ ವರ್ಣ
*'Reclining Nude' Poster Colour*

'ಪಾಂಚಾಲಿ' ಅಕ್ರಿಲಿಕ್
*'Panchali' Acrylic*





'ಸಂಯೋಜನೆ' ಪೋಸ್ಟರ್ ವರ್ಣ
*'Composition' Poster Colour*

'ಹಂಪೆ' ಜಲವರ್ಣ
*'Hampi' Water Colour*

'ನನ್ನ ಹಳ್ಳಿ' ತೈಲವರ್ಣ
'My Village' Oil

ವ್ಯಕ್ತಿಚಿತ್ರ ತೈಲವರ್ಣ
Portrait Oil







'ಬಾಹ್ಯಾಕಾಶಯಾನ' ಅಕ್ರಿಲಿಕ್
'Space Travel' Acrylic



'ಹಕ್ಕಿ ಮತ್ತು ಮೊಗ್ಗು' ತೈಲವರ್ಣ
'Bird and Bud' Acrylic



'ತಿಂಗಳು' ಫೋಟೋ ವರ್ಣ
*'Full moon' Photo colour*

'ಚೇತನ' ಫೋಟೋ ವರ್ಣ
*'Chetana' Photo colour*

'ಅಂಕುರ' ಅಕ್ರಿಲಿಕ್
*'Sprouting' Acrylic*



'ಪುಡಾರಿ ಮತ್ತು ತತ್ತ್ವಜ್ಞಾನಿ' ಇಂಡಿಯಾ ಇಂಕ್
*'Politician and Philosopher' India Ink*





'ಸ್ಪರ್ಶ' ಅಕ್ರಿಲಿಕ್
*'Touch' Acrylic*



ವಾಯೇಜರ್ ಅಕ್ರಿಲಿಕ್
*'Voyager' Acrylic*

'ಇಜ್ಜೋಡು' ಇಂಡಿಯಾ ಇಂಕ್
*'Mis Match' Drawing India Ink*





'ಶೋಷಣೆ' ಇಂಡಿಯಾ ಇಂಕ್
*'Exploitation' Drawing India Ink*



'ಪ್ರಕೃತಿ–ಪುರುಷ' ಇಂಡಿಯಾ ಇಂಕ್
*'Prakruthi-Purusha' Drawing India Ink*



'ಶೋಷಣೆ' ಇಂಡಿಯಾ ಇಂಕ್
*'Exploitation' Drawing India Ink*

ಸ್ಟಿಲ್ ಲೈಫ್ ವುಡ್‌ಕಟ್
*Still Life Wood Cut*



'ಮಿಸ್ ವರ್ಲ್ಡ್' ಲಿಥೊ ಮಾಧ್ಯಮ
*'Miss World' Lithograph*



'ಪ್ರೇಮ ನಗರ' ಇಂಡಿಯಾ ಇಂಕ್
*'City of Love' Drawing India Ink*

ವ್ಯಕ್ತಿ ಚಿತ್ರ ತೈಲವರ್ಣ
*Portrait Oil*



'ಶಿವ' ಜಲವರ್ಣ, ಇಂಕ್
*'Shiva' Water Colour, Ink*





ವ್ಯಕ್ತಿ ಚಿತ್ರ ತೈಲವರ್ಣ
*Portrait Oil*



'ತೃಪ್ತಿ' ಕಲರ್ಡ್ ಇಂಕ್
*'Contentment' Coloured Ink*

'ಹೆಣ್ಣು' ಲಿಥೊ
*'Woman' Lithograph*



ಲ್ ಲೈಫ್ ಇಂಡಿಯಾ ಇಂಕ್
*Still Life India Ink*





'ಗ್ರಹಣಕ್ಕೆ ಮೊದಲು' ಬ್ಲೋ ಟಾರ್ಚ್
*'Before Eclipse' Blow Torch on Wood*



'ಕಲ್ಲಂಗಡಿ ಹಣ್ಣು' ತೈಲವರ್ಣ
*'Water Melon' Oil*

'ಬೆಕ್ಕು' ಇಂಡಿಯಾ ಇಂಕ್
*'Cat' India Ink*





'ಶೋಧ' ಅಕ್ರಿಲಿಕ್ ವರ್ಣ
*'Exploration' Acrylic*



'ಚಂದ್ರನ ಸೆರೆ' ತೈಲವರ್ಣ
*'Catching the Moon' Oil*

'ಮಮತೆ' ಪ್ಲಾಸ್ಟರ್
*'Mother and Child' Plaster*





'ಲೀಡರ್' ಪ್ಲಾಸ್ಟರ್
*'Leader' Plaster*



'ವಧು' ಪ್ಲಾಸ್ಟರ್
*'Bride' Plaster*



'ಮುಖಗಳು' ಪ್ಲಾಸ್ಟರ್
*'Faces' Plaster*





'ಹಿಪ್ಪಿಗಳು' ಅಕ್ರಿಲಿಕ್
*'Hippies' Acrylic*

'ಬಯಕೆ' ಅಕ್ರಿಲಿಕ್
*'Desire' Acrylic*





'ಮುಡಿ ಮತ್ತು ಹೂ' ಇಂಡಿಯಾ ಇಂಕ್
*'Adoration' Water Colour and Ink*

# 1

> We are all of us children of our time
> and can never leap over its shadows.
> - Richard Strauss

> The modern and the old have always been.
> - Ferruccio Busoni

## ROCKS OF BADAMI

Individuals are determined by the physical and cultural environment. But only a few can bring an effective change in the environment.

Change is the character of life. A living culture is like a river, ever flowing. An attempt to stop this river ends in defeat - whether by an individual, organisation or society - as the flood overflows any barrier. Similarly changed present is only a link in the continuity. Even the individual who is a cause in this process is also a link. Only change is permanent. The rate of change may very. This is more so in the field of art. New ideas struggle to break the shackles of tradition. Somethimes changes happen in quick succession, that which happens in few generations takes place in a

single generation. Such was the time in the post independent era. A slow transformation at the beginning of the century became intense in the 50's and 60's. R.M. Hadpad was one individual who gave a new direction, a new vision and changed environment of art in Karnataka. Art was always a part of his life. As life changes art also has to change. It requires motivation and inspiration to happen. Hadapad's talent was the catalyst for such a change.

Art always progresses by absorbing the essence of the past. In analysing the life and achievement of an artist it is noteworthy to examine the contribution of the past to the present. After all, artist is a child of the environment. Badami is the birth place of Hadpad. He spent his childhood and first schooling there. Later he continued his education at Guledgudda and Bagalkot's Basaveshwara High School. He took art as an elective subect in S.S.C. Earlier as a private candidate he had passed in an exam of J.J. School of Art of Bombay through Vijaya Kalamandira at Gadag founded by T.P. Akki. After S.S.C. he passed his intermediate and advanced painting at Kalamandir, Hubli, founded by Minajigi and also completed Diploma from J.J.Schoo of Art. From Kalamandir he completed DTC and AM. His real school was Badami, its hills, its caves. His childhood adventures, experiences moulded the artist Hadapad, made deep impressions on his psyche. Influence of childhood expriences can be identified, in most of the artists in the world, which helps us in analysing the art works. For a child all experiences are living. Trees or rocks and everything else pulsate with life. They have the capacity to experience in full using all the faculties simultaneously. Everything is absorbed in toto and stored in the unconscious. Artists with a strong visual sense can draw from these experiences unintentionally. Such was the influence of childhood days at Badami on Hadapad.

The art of Karnataka has bloosomed in the rocks of Badami. Hadapad is only a continuation of that tradition of chalukyan style

